3. Hence the following clarification is issued.

**CLARIFICATION NO.CLR.CR.49/11-12, DATED 31-12-2011**

It is hereby clarified that the rates of tax applicable on the following goods are as indicated under:

| S1.No. | Goods | Rate of tax/Section |
|---|---|---|
| 1. | Containers - in various shapes and sizes for storage of cereals, pulses, sugar etc. | 14% Under Section 4(1) (b) of the KVAT Act, 2003. |
| 2. | Vegetables storing racks with wheels ( trolley) | 14% Under Section 4(1) (b) of the KVAT Act, 2003. |
| 3. | Basins - shallow vessels used for cleaning fruits, vegetables, food grains. | 5% under entry 5 of the Third Schedule of the KV AT Act 2003 |
| 4. | Tubs – deep vessels/deeper than basins used for same purpose as basins are used | 5% under entry 5 of the Third Schedule of the KV AT Act 2003 |
| 5. | Bowls for vegetables - for handling food articles. | 5% under entry 5 of the Third Schedule of the KV AT Act 2003 |
| 6. | Cutlery stand | 14% Under Section 4(1) (b) of the KVAT Act, 2003. |
| 7. | Patla - to sit on in bathrooms for bathing, cleaning clothes or vessels | 14% Under Section 4(1) (b) of the KVAT Act, 2003. |
| 8. | Waste basin / Dust bin | 14% Under Section 4(1) (b) of the KVAT Act, |
| 9. | Vegetable tray for keeping vegetables | 14% Under Section 4(1) (b) of the KVAT Act, |
| 10. | Table hot mats - to place hot utensils | 14% Under Section 4(1) (b) of the KVAT Act, |
| 11. | Mugs - for handling water & coffee | 5% under entry 5 of the Third Schedule of the KV AT Act 2003 |
| 12. | Plastic glass / tumblers | 5% under entry 5 of the Third Schedule of the KV AT Act 2003 |
| 13. | Baskets for storage of vegetables and fruits in kitchen | 14% Under Section 4(1) (b) of the KVAT Act |
| 14. | Vegetable chopping boards | 5% under entry 5 of the Third Schedule of the KV AT Act 2003 |
| 15. | Dust pans for collecting dust and waste after sweeping | 14% Under Section 4(1) (b) of the KVAT Act |
| 16. | Plates of paper and plastic | 5% under entry 29 of the Third Schedule of the KV AT Act 2003 |
| 17. | Other plates | 5% under entry 5 of the Third Schedule of the KV AT Act 2003 |
| 18. | Drums for storage of food grains | 14% Under Section 4(1) (b) of the KVAT Act |
| 19. | Hangers used for hanging clothes | 14% Under Section 4(1) (b) of the KVAT Act |
| 20. | Lunch boxes | 14% Under Section 4(1) (b) of the KVAT Act |

| S1.No. | Goods | Rate of tax/Section |
|---|---|---|
| 21. | Trays for serving food | 14% Under Section 4(1) (b) of the KVAT Act |
| 22. | Jugs for dispensing water, juices, etc. | 5% under entry 5 of the Third Schedule of the KV AT Act 2003 |
| 23. | Pan for cooking in microwave | 14% Under Section 4(1) (b) of the KVAT Act |
| 24. | Casseroles - insulated containers for keeping cooked food warm / cold | 14% Under Section 4(1) (b) of the KVAT Act |
| 25. | Ice cube tray | 14% Under Section 4(1) (b) of the KVAT Act |
| 26. | Jars like containers | 14% Under Section 4(1) (b) of the KVAT Act |
| 27. | Scoops - used for serving / dispensing food articles | 5% under entry 5 of the Third Schedule of the KV AT Act 2003 |
| 28. | Dishes - for handling food | 5% under entry 5 of the Third Schedule of the KV AT Act 2003 |
| 29. | Spices / Masala box spices organizer | 14% Under Section 4(1) (b) of the KVAT Act |
| 30. | Microwave cookware in various shapes, designs, sizes for cooking on microwave | 5% under entry 5 of the Third Schedule of the KV AT Act 2003 |

**PRADEEP SINGH KHAROLA,**

**P R 13** Commissioner of Commercial Taxes

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.**

**ಭೂಸ್ವಾಧೀನ ಕಾಯ್ದೆ ಕಲಂ. 4(1) ಕರ್ನಾಟಕ ತಿದ್ದುಪಡಿ ಕಾಯ್ದೆ 33/91ರ ಅನ್ವಯ ಅಧಿಸೂಚನೆ**

**ಕ್ರಮಾಂಕ : ಕಗೃಮಂ./ಭೂಸ್ವಾವಿ./ಚಿಕ್ಕೋನಹಳ್ಳಿ/125/11–12**

ಈ ಅಧಿಸೂಚನೆಯ ಅನುಬಂಧದಲ್ಲಿ ನಮೂದಿನಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಕರ್ನಾಟಕ ಗೃಹ ಮಂಡಳಿಯ ವಸತಿ ಯೋಜನೆಯ ರಸ್ತೆ ಸಂಪರ್ಕಕ್ಕಾಗಿ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು ಇವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯವ 33ರಲ್ಲಿ ತಿದ್ದುಪಡಿಯಾದ, 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2)ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು, ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ, ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಗೃಹ ಆಯುಕ್ತರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ತಿಳಿಸಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಯಾ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಬಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

ಜಿಲ್ಲೆ : ಮೈಸೂರು ತಾಲ್ಲೂಕು : ಕೆ.ಆರ್. ಪೇಟೆ ಹೋಬಳಿ : ಕಸಬಾ ಗ್ರಾಮ : ಚಿಕ್ಕೋನಹಳ್ಳಿ

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ | ತರಹೆ | ಚಕ್ಕುಬಂದಿ ವಿಸ್ತೀರ್ಣ ಎ/ಗು | | | | ಬೇಕಾದ ಜಮೀನಿನ ವಿಸ್ತೀರ್ಣ | | | ಆಕಾರ ವಿಸ್ತೀರ್ಣ |
|---|---|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ಒಟ್ಟು ಎ–ಗುಂ | ಖರಾಬು | ಬಾಕಿ | |
| 1. | ಶ್ರೀಮತಿ ಚನ್ನಮ್ಮ ಕೋಂ ಕರಿಗೌಡ | ಚನ್ನಮ್ಮ | 44/6 ರ ಪೈಕಿ | ಖುಷ್ಕಿ | ರಸ್ತೆ | ಸ.ನಂ. 45/5 | ಸ.ನಂ. 45/3 ರ ಉಳಿಕೆ ಜಮೀನು | ಸ.ನಂ. 45/6 | 0.02 1/4 | – | 0.024 | |
| 2. | ಶ್ರೀ ದ್ಯಾವೇಗೌಡ ಬಿನ್ ದ್ಯಾವೇಗೌಡ | ದ್ಯಾವೇಗೌಡ | 45/3ರ ಪೈಕಿ | ಖುಷ್ಕಿ | ಸ.ನಂ. 45/5 | ಸ.ನಂ. 72/1 | ಸ.ನಂ. 45/5 | ಸ.ನಂ. 45/5ರ ಉಳಿಕೆ ಜಮೀನು | 0.02 3/4 | – | 0.02.12 | |
| 3. | ಶ್ರೀ ದ್ಯಾವೇಗೌಡ ಬಿನ್ ದ್ವಾವೇಗೌಡ | ದ್ವಾವೇಗೌಡ | 45/5ರ ಪೈಕಿ | ಖುಷ್ಕಿ | ಸ.ನಂ. 44/6 & 45/6 | ಸ.ನಂ. 45/3 | ಸ.ನಂ. 45/5 ರ ಉಳಿಕೆ ಜಮೀನು | ಸ.ನಂ. 45/5ರ ಉಳಿಕೆ ಜಮೀನು | 0.14.00 | – | 0.14.00 | |
| 4. | ಶ್ರೀ ಬೋಮ್ಮರಾಯಿಗೌಡ ಬಿನ್ ಲೇ ಬೊಮ್ಮಶೆಟ್ಟಿ ಗೌಡ | ಶ್ರೀ ಬೋಮ್ಮರಾಯಿಗೌಡ | 45/6 ಪೈಕಿ | ಖುಷ್ಕಿ | ರಸ್ತೆ | ಸ.ನಂ. 45/5 | ಸ.ನಂ. 45/6 | ಸ.ನಂ. 45/6ರ ಉಳಿಕೆ ಜಮೀನು | 0.01 1/2 | – | 0.01.8 | |
| 5. | ಶ್ರೀ ಕೊಂಡೇಗೌಡ ಬಿನ್ ಕಾಳೇಗೌಡ | ಶ್ರೀ ಕೊಂಡೇಗೌಡ | 70/1 ಪೈಕಿ | ಖುಷ್ಕಿ | ಸ.ನಂ. 70/2 | ಸ.ನಂ. 74 & ಕೆ.ಹೆಚ್.ಬಿ. ಆಸ್ತಿ | ಸ.ನಂ. 70/1ರ ಉಳಿಕೆ ಜಮೀನು | ಸ.ನಂ. 71 | 0.09 | – | 0.09 | |

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ | ತರಹೆ | ಚಕ್ಕುಬಂದಿ ವಿಸ್ತೀರ್ಣ ಎ/ಗು | | | | ಬೇಕಾದ ಜಮೀನಿನ ವಿಸ್ತೀರ್ಣ | | | ಆಕಾರ ವಿಸ್ತೀರ್ಣ |
|---|---|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ಒಟ್ಟು ಎ-ಗುಂ | ಖರಾಬು | ಬಾಕಿ | |
| 6. | ಶ್ರೀ ಜವರೇಗೌಡ ಬಿನ್ ಕಾಳೇಗೌಡ | ಶ್ರೀ ಜವರೇಗೌಡ | 70/2 ಪೈಕಿ | ಖುಷ್ಕಿ | ಸ.ನಂ. 72/1 | ಸ.ನಂ. 70/1 | ಸ.ನಂ. 70/2ರ ಉಳಿಕೆ ಜಮೀನು | ಸ.ನಂ. 70/2ರ ಉಳಿಕೆ ಜಮೀನು | 0.23.00 | | 0.23.00 | |
| 7. | ಶ್ರೀಮತಿ ಜವರಮ್ಮ ಕೋಂ ಕೆಂಪೇಗೌಡ | ಶ್ರೀಮತಿ ಜವರಮ್ಮ | 71 ಪೈಕಿ | ಖುಷ್ಕಿ | ಸ.ನಂ. 71ರ ಉಳಿಕೆ ಜಮೀನು | ಕೆ.ಹೆಚ್.ಬಿ. ಆಸ್ತಿ | ಸ.ನಂ. 70/1 | ಸ.ನಂ. 71 ರ ಉಳಿಕೆ ಜಮೀನಿ | 0.04.8 | – | 0.04 1/2 | |
| 8. | ಶ್ರೀ ಜವರೇಗೌಡ ಬಿನ್ ಲೇ ಬೊಮ್ಮಶೆಟ್ಟಿ ಗೌಡ | ಶ್ರೀ ಜವರೇಗೌಡ | 72/1ರ ಪೈಕಿ | ಖುಷ್ಕಿ | ಸ.ನಂ. 45/3 ಮತ್ತು 5 | ಸ.ನಂ. 70/2 | ಸ.ನಂ. 72/4 & 5 ರ ಉಳಿಕೆ ಜಮೀನು | ಸ.ನಂ. 72/1,3 ರ ಉಳಿಕೆ ಜಮೀನು | 0.11.08 | – | 0.11 1/2 | |
| 9. | ಶ್ರೀ ಮಂಜುನಾಥ ಟಿ.ಬಿನ್. ಲೇ ವೈ.ಆರ್. ತಿಮ್ಮಣ್ಣ | ಶ್ರೀ ಮಂಜುನಾಥ | 72/3ರ ಪೈಕಿ | ಖುಷ್ಕಿ | ಸ.ನಂ. 72/5,6,7 | ಸ.ನಂ. 72/1 | ಸ.ನಂ. 72/4,5,6 | 72/3 ರ ಉಳಿಕೆ ಜಮೀನು | 0.03 | – | 0.03 | |
| 10. | ಶ್ರೀ ನಾರಾಯಣ ಹೆಚ್.ಟಿ. ಬಿನ್ ತಿಮ್ಮೇಗೌಡ | ಶ್ರೀ ನಾರಾಯಣ ಹೆಚ್.ಟಿ. | 72/4ರ ಪೈಕಿ | ಖುಷ್ಕಿ | ಸ.ನಂ. 72/5 | ಸ.ನಂ. 72/1 | ಸ.ನಂ. 72/4ರ ಉಳಿಕೆ ಜಮೀನು | ಸ.ನಂ. 72/3 | 0.01 | – | 0.01 | |
| 11. | ಶ್ರೀ ಮಂಜುನಾಥ ಪ್ರಸಾದ್ ಬಿ.ಕೆ. ಬಿನ್ ಬಿ.ಆರ್. ಕೃಷ್ಣೇಗೌಡ | ಶ್ರೀ ಮಂಜುನಾಥ ಪ್ರಸಾದ್ ಬಿ.ಕೆ. | 72/5ರ ಪೈಕಿ | ಖುಷ್ಕಿ | ಸ.ನಂ. 72/5 | ಸ.ನಂ. 72/4 | ಸ.ನಂ. 72/5ರ ಉಳಿಕೆ ಜಮೀನು | ಸ.ನಂ. 72/3 | 0.02 | – | 0.02 | |

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ | ತರಹೆ | ಚಕ್ಕುಬಂದಿ ವಿಸ್ತೀರ್ಣ ಎ/ಗು | | | | ಬೇಕಾದ ಜಮೀನಿನ ವಿಸ್ತೀರ್ಣ | | | ಆಕಾರ ವಿಸ್ತೀರ್ಣ |
|---|---|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ಒಟ್ಟು ಎ-ಗುಂ | ಖರಾಬು | ಬಾಕಿ | |
| 12. | ಶ್ರೀ ಶಂಕರ್ ಹೆಚ್.ಕೆ. ಬಿನ್ ಕರಿಗುಂಡಯ್ಯ | ಶ್ರೀ ಶಂಕರ್ ಹೆಚ್.ಕೆ. | 72/6ರ ಪೈಕಿ | ಖುಷ್ಕಿ | ಸ.ನಂ. 72/7 | ಸ.ನಂ. 72/5 | ಸ.ನಂ. 72/1 | ಸ.ನಂ. 72/3 | 0.02 | – | 0.02 | |
| 13. | ಶ್ರೀಮತಿ ನಾಗರತ್ನ ಆರ್.ಎ. ಕೋಂ ಎಂ ಮರಿಸಿದ್ದೇಗೌಡ | ಶ್ರೀಮತಿ ನಾಗರತ್ನ ಆರ್.ಎ. | 72/7ರ ಪೈಕಿ | ಖುಷ್ಕಿ | ಸ.ನಂ. 72/1 | ಸ.ನಂ. 72/6 | ಸ.ನಂ. 72/1 | 72/2 ರ ಉಳಿಕೆ ಜಮೀನು ಮತ್ತು ಸ.ನಂ. 72/3 | 0.01.8 | ಸ.ನಂ. 72/4ರ ಉಳಿಕೆ ಜಮೀನು | 0.01 1/2 | |
| ಒಟ್ಟು | | | | | | | | | **1.38** | | **1.38** | |

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

**ಪಿ.ಡಿ. 24**

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.**

**ಕ್ರಮಾಂಕ : ಕಗೃಮಂ./ಭೂಸ್ವಾವಿ./75/2010-11 ದಿನಾಂಕ : 21ನೇ ಜುಲೈ 2011.**

ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಕಾಯ್ದೆ (ಕೇಂದ್ರ 46) ರಲ್ಲಿ ವಿಧಿತವಾದ ಅಧಿಕಾರದಂತೆ ಹಾಗೂ ಕರ್ನಾಟಕ ಜನರಲ್ ಕ್ಲಾಸ್ ಆಕ್ಟ್ 1897 (ಆಕ್ಟ್ iii ಆಫ್ ಆಕ್ಟ್ 1889 ಕಲಂ 21) ರ ಅನ್ವಯ ಈ ಕಛೇರಿಯಿಂದ ಹೊರಡಿಸಲಾಗಿದ್ದ 4(1)ರ ಅಧಿಸೂಚನೆ ಸಂಖ್ಯೆ : ಕಗೃಮಂ.ಭೂಸ್ವಾವಿ./75/2010-11. ದಿನಾಂಕ : 24-8-2010ರ ಅಧಿಸೂಚನೆಯೂ ಕರ್ನಾಟಕ ರಾಜ್ಯಪತ್ರದ ಭಾಗ-3 ಪುಟ ಸಂಖ್ಯೆ 3926 ರಿಂದ 3928 ರವರೆಗೆ ದಿನಾಂಕ : 9-9-2010 ರಲ್ಲಿನ ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ತಾಲ್ಲೂಕು, ಕಲಾದಗಿ ಹೋಬಳಿ, ಗದ್ದನಕೇರಿ ಗ್ರಾಮಕ್ಕೆ ಸಂಬಂಧಪಟ್ಟ ಪ್ರಕಟಣೆಯನ್ನು ಹಿಂತೆಗೆದುಕೊಳ್ಳಲಾಗಿದೆ.

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

**ಪಿ.ಡಿ. 25**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ.. ಪಿಡಿ 208 ಎಸ್‌ಎಂಸಿ 2011. ಬೆಂಗಳೂರು, ದಿನಾಂಕ.17.02.2012**

**ವಿಷಯ :** ಜನನ, ಮರಣ ಅಂಕಿ ಅಂಶಗಳನ್ನು ಗ್ರಾಮಮಟ್ಟ, ಪ್ರಾಥಮಿಕ/ಸಮುದಾಯ ಆರೋಗ್ಯ ಕೇಂದ್ರಗಳ ಮಟ್ಟ, ತಾಲ್ಲೂಕುಮಟ್ಟ ಹಾಗೂ ಜಿಲ್ಲಾಮಟ್ಟದಲ್ಲಿ ಮರುಹೊಂದಾಣಿಕೆ ಮಾಡುವುದರ ಕುರಿತು ಮಾದರಿ ನಮೂನೆಗಳನ್ನು ಕಾರ್ಯಗತಗೊಳಿಸುವ ಬಗ್ಗೆ.

ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ನೋಂದಣಿಯಾಗುವ ಜನನ, ಮರಣ ಘಟನೆಗಳ ಮಾಸಿಕ ವರದಿಗಳನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಂದ ಪ್ರತಿ ತಿಂಗಳು ಪಡೆದು ಮುಖ್ಯ ನೋಂದಣಾಧಿಕಾರಿಗಳು ಹಾಗೂ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಇವರ ಕಛೇರಿಯಲ್ಲಿ ಕ್ರೋಢೀಕರಿಸಲಾಗುತ್ತದೆ. ಸದರಿ ವರದಿಗಳ ಪರಿಶೀಲನೆ ಸಂದರ್ಭದಲ್ಲಿ, ಸಾಂಸ್ಥಿಕ (Hospitals) ಜನನ ಘಟನೆಗಳಿಗಿಂತ, ಮನೆಯಲ್ಲಿ ಸಂಭವಿಸುವ ಜನನ ಘಟನೆಗಳೇ ಅನೇಕ ಕಡೆ ಹೆಚ್ಚಾಗಿರುವುದು ಕಂಡುಬಂದಿದ್ದು, ಇದನ್ನು ಆರೋಗ್ಯ ಇಲಾಖೆಯ ಮಾಹಿತಿಯೊಂದಿಗೆ ತುಲನೆ ಮಾಡಿದಾಗ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ವರದಿಯಲ್ಲಿ ಹಲವಾರು ವ್ಯತ್ಯಾಸಗಳಿರುವುದು ಮುಖ್ಯ ನೋಂದಣಾಧಿಕಾರಿಗಳ ಗಮನಕ್ಕೆ ಬಂದಿರುತ್ತದೆ. ಈ ಹಿನ್ನೆಲೆಯಲ್ಲಿ ಜನನ, ಮರಣ ಅಂಕಿ ಅಂಶಗಳ ಸಂಗ್ರಹಣೆಯಲ್ಲಿ ಕೆಲವು ಬದಲಾವಣೆಗಳನ್ನು ತರುವ ಉದ್ದೇಶದಿಂದ ಆರೋಗ್ಯ ಇಲಾಖೆ, ಕಂದಾಯ ಇಲಾಖೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಹಾಗೂ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಪ್ರತಿನಿಧಿಗಳನ್ನೊಳಗೊಂಡ ಸಮಿತಿಯನ್ನು ಜಂಟಿ ನಿರ್ದೇಶಕರು, ಎ.ಜಿ.ಎಸ್.ವಿಭಾಗ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಇವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದೆ.

ಸದರಿ ಸಮಿತಿಯು ಸಭೆ ಸೇರಿ ವರದಿ ತಯಾರಿಯಲ್ಲಿನ ಕ್ರಮಗಳ ಕುರಿತು ಗುಣಮಟ್ಟವನ್ನು ಉತ್ತಮಪಡಿಸಲು ಕೆಲವು ಶಿಫಾರಸ್ಸುಗಳನ್ನು ಮಾಡಿರುತ್ತದೆ. ಸದರಿ ಸಮಿತಿಯ ಶಿಫಾರಸ್ಸಿನಂತೆ ಗ್ರಾಮಮಟ್ಟ ಮತ್ತು ತಾಲ್ಲೂಕು ಮಟ್ಟದಲ್ಲಿ ಈ ಕೆಳಗಿನಂತೆ ಸಮಿತಿಗಳನ್ನು ರಚಿಸಿ ಆದೇಶಿಸಲಾಗಿದೆ.

**ಅ. ಗ್ರಾಮಮಟ್ಟದ ಮರುಹೊಂದಾಣಿಕೆ :**

ಗ್ರಾಮಮಟ್ಟದ ಮರುಹೊಂದಾಣಿಕೆ ವರದಿಯನ್ನು ಪರಿಶೀಲಿಸಿ ಅನುಬಂಧ–1 ರಲ್ಲಿ ತಯಾರಿಸಿ ಈ ಕೆಳಕಂಡ ಸಮಿತಿಯ ಅನುಮೋದನೆಯೊಂದಿಗೆ ಹಾಗೂ ಎಲ್ಲರ ಸಹಿಯೊಂದಿಗೆ ತಹಶೀಲ್ದಾರರಿಗೆ ಸಲ್ಲಿಸಬೇಕು:

1. ಗ್ರಾಮಮಟ್ಟದಲ್ಲಿ ನೋಂದಣಿದಾರರು (ಗ್ರಾಮಲೆಕ್ಕಾಧಿಕಾರಿಗಳು) – ಅಧ್ಯಕ್ಷರು.
2. ಎ.ಎನ್.ಎಂ.ಗಳು – ಸದಸ್ಯರು.
3. ಅಂಗನವಾಡಿ ಕಾರ್ಯಕರ್ತೆಯರು – ಸದಸ್ಯರು.

ಗ್ರಾಮಮಟ್ಟದ ನೋಂದಣಿ ಕೇಂದ್ರ ವರದಿಯನ್ನು ಗಂಭೀರವಾಗಿ ಪರಿಶೀಲಿಸಿ ಅನುಬಂಧ–1 ರಲ್ಲಿ ಮುಂಬರುವ ತಿಂಗಳ 2ನೇ ತಾರೀಖಿನೊಳಗೆ ತಹಶೀಲ್ದಾರರ ಕಛೇರಿಗೆ ಮೇಲೆ ತಿಳಿಸಿದ ಮೂರು ಜನರು ಸಹಿ ಮಾಡಿ ತಪ್ಪದೇ ಕಳುಹಿಸತಕ್ಕದ್ದು.

ಇದೇ ರೀತಿ ಸದರಿ ನೋಂದಣಿ ಕೇಂದ್ರಗಳ ವ್ಯಾಪ್ತಿಯ ಉಪ ಕೇಂದ್ರಗಳಲ್ಲಿ ಅಂದರೆ ಆರೋಗ್ಯ ಸಂಸ್ಥೆಗಳಲ್ಲಿ (ಪ್ರಾಥಮಿಕ ಆರೋಗ್ಯ ಕೇಂದ್ರ, ಸಮುದಾಯ ಆರೋಗ್ಯ ಕೇಂದ್ರ, ಇತರೆ) ಆದ ಜನನ, ಮರಣಗಳಿಗೆ ಸಂಬಂಧಿಸಿದಂತೆ, ವೈದ್ಯಾಧಿಕಾರಿಗಳು ಅನುಬಂಧ–1 ರಲ್ಲಿ ಅವರ ಆರೋಗ್ಯ ಕೇಂದ್ರಕ್ಕೆ ಸಂಬಂಧಿಸಿದ ಮಾಹಿತಿಯನ್ನು ಮುಂಬರುವ ತಿಂಗಳ 2ನೇ ತಾರೀಖಿನೊಳಗೆ ತಹಶೀಲ್ದಾರರ ಕಛೇರಿಗೆ ತಪ್ಪದೇ ಕಳುಹಿಸತಕ್ಕದ್ದು.

**ಆ. ತಾಲ್ಲೂಕು ಮಟ್ಟದ ಮರುಹೊಂದಾಣಿಕೆ:**

ತಾಲ್ಲೂಕುಮಟ್ಟದಲ್ಲಿ ಜನನ, ಮರಣ ಅಂಕಿ ಅಂಶಗಳ ಮರುಹೊಂದಾಣಿಕೆ ಮಾಡುವ ಕುರಿತು ಈ ಕೆಳಕಂಡ ಸಮಿತಿಯನ್ನು ರಚಿಸಲಾಗಿದೆ:

1. ತಹಶೀಲ್ದಾರರು – ಅಧ್ಯಕ್ಷರು.
2. ತಾಲ್ಲೂಕು ಆರೋಗ್ಯ ಅಧಿಕಾರಿಗಳು – ಸದಸ್ಯರು.
3. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು – ಸದಸ್ಯರು.
4. ತಹಶೀಲ್ದಾರರ ಕಛೇರಿಯಲ್ಲಿರುವ ಸಾಂಖ್ಯಿಕ ನಿರೀಕ್ಷಕರು – ಸಂಚಾಲಕರು.

ತಾಲ್ಲೂಕು ಕಛೇರಿಯಲ್ಲಿ ತಾಲ್ಲೂಕಿನ ಎಲ್ಲಾ ಗ್ರಾಮಗಳಿಂದ ಬಂದಿರುವ ಮಾಹಿತಿಯನ್ನು ಆ ಕಛೇರಿಯಲ್ಲಿ ಕಾರ್ಯ ನಿರ್ವಹಿಸುವ ಸಾಂಖ್ಯಿಕ ನಿರೀಕ್ಷಕರು ಪರಿಶೀಲಿಸಿ, ಕ್ರೋಢೀಕರಿಸಿ, ಗ್ರಾಮವಾರು ಮಾಹಿತಿಗಳನ್ನು (ಉಪ ನೋಂದಣಿ ಕೇಂದ್ರಗಳ ಮಾಹಿತಿಯೊಂದಿಗೆ) ಹಾಲಿ ಸಲ್ಲಿಸುತ್ತಿರುವ ನಮೂನೆಯಲ್ಲಿಯೇ (ಪ್ರಪತ್ರ 15–ಎ) ವರದಿ ತಯಾರಿಸಿ, ಮೇಲಿನ ತಾಲ್ಲೂಕುಮಟ್ಟದ ಸಮಿತಿಯ ಅನುಮೋದನೆ ಪಡೆದು ಹಾಗೂ ಮೂರು ಜನ ಅಧಿಕಾರಿಗಳ (ಅಧ್ಯಕ್ಷರು/ಸದಸ್ಯರು) ಸಹಿಯೊಂದಿಗೆ ತಪ್ಪದೇ ಮುಂಬರುವ ತಿಂಗಳ 5ನೇ ತಾರೀಖಿನೊಳಗೆ ಆಯಾ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಹಾಗೂ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿಗೆ ಕಳುಹಿಸತಕ್ಕದ್ದು ಮತ್ತು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿನ ಅಂಕಿ ಅಂಶಗಳಿಗೂ ಈ ಮಾಹಿತಿಗೂ ವ್ಯತ್ಯಾಸವಿದ್ದಲ್ಲಿ ಈ ಬಗ್ಗೆ ಸಂಬಂಧಪಟ್ಟ ತಹಶೀಲ್ದಾರರ ಸ್ಪಷ್ಟೀಕರಣವನ್ನು ಪಡೆಯತಕ್ಕದ್ದು.

**ಇ. ಜಿಲ್ಲಾಮಟ್ಟದ ಮರುಹೊಂದಾಣಿಕೆ:**

ಆಯಾ ಜಿಲ್ಲೆಗೆ ಸಂಬಂಧಿಸಿದಂತೆ, ಎಲ್ಲಾ ತಾಲ್ಲೂಕುಗಳಿಂದ ಬಂದಿರುವ ವರದಿಯನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯ ಸಹಾಯಕ ಸಾಂಖ್ಯಿಕ ಅಧಿಕಾರಿಯು ಪರಿಶೀಲಿಸಿ, ಕ್ರೋಢೀಕರಿಸಿ ಜನನ, ಮರಣದ ವಿಶೇಷ ಮಾಸಿಕ ಜಿಲ್ಲಾ ವರದಿಯನ್ನು ನಿಗದಿತ ನಮೂನೆಯಲ್ಲಿ ಸಿದ್ದಪಡಿಸಿ ಜಿಲ್ಲಾ ವರದಿಯನ್ನು ಜಿಲ್ಲಾಧಿಕಾರಿಗಳೂ ಮತ್ತು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಸಹಿಯೊಂದಿಗೆ, ಮುಖ್ಯ ನೋಂದಣಾಧಿಕಾರಿಗಳ ಕಛೇರಿಗೆ ಮುಂಬರುವ ತಿಂಗಳಿನ ದಿನಾಂಕ 10 ನೇ ತಾರೀಖಿನೊಳಗೆ ತಪ್ಪದೇ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕೆ.ಶ್ರೀನಿವಾಸ ಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ (ಎಸ್–5).

**ಅನುಬಂಧ–1**

**ಗ್ರಾಮಾವಾರು ಜನನ ಮರಣ ನೋಂದಣಿ ವರದಿ**

| | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|
| ಮಾಹೆ ವರ್ಷ | | | | | | | | | | | | | | | | | |
| ಜಿಲ್ಲೆ: | | | | | | | ಗ್ರಾಮ: | | | | | ತಾಲ್ಲೂಕು: | | | | | |
| ಹೊಸದಾಗಿ ನೋಂದಣಿಯಾದ ಘಟನೆಗಳು | | | | | | | | | | | | ತಡವಾಗಿ ನೋಂದಣಿಯಾದ ಘಟನೆಗಳು | | | | | |
| ಸಜೀವ ಜನನಗಳು | | | | ಮರಣಗಳು | | | | ಶಿಶುಮರಣ | | ಜನನಗಳು | | ಮರಣಗಳು | | ಶಿಶುಮರಣ | | | |
| ಆಸ್ಪತ್ರೆಯಲ್ಲಿ (ಉಪನೋಂದಣಿ ಘಟಕ ಹೊರತುಪಡಿಸಿ | | ಮನೆಯಲ್ಲಿ | | ಆಸ್ಪತ್ರೆಯಲ್ಲಿ | | ಮನೆಯಲ್ಲಿ | | | | | | | | | | | |
| ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | | |
| | | | | | | | | | | | | | | | | | |

## ಉಪನಿರ್ದೇಶಕರವರ ಕಾರ್ಯಾಲಯ,
## ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ ಜಿಲ್ಲೆ, ದಾವಣಗೆರೆ

### ಅಧಿಕೃತ ಜ್ಞಾಪನ

**ಸಂ: ಆ3. ದೂರು ಸಿ.ಸಿ.ಎ. 24/2007-08, ದಿನಾಂಕ: 13-03-2012**

ವಿಷಯ : ಶ್ರೀ.ಜಿ.ಕೆ.ಮಾದರ್, ಸಹ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಷಂಷೀಪುರ, ಹರಿಹರ ತಾಲ್ಲೂಕು ಇವರ ಅನಧಿಕೃತ ಗೈರುಹಾಜರಿ ಬಗ್ಗೆ.

ಉಲ್ಲೇಖ : 1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹರಿಹರ ರವರ ಪತ್ರ ಸಂಖ್ಯೆ: ಸಿ2 ದೂರು ಅ.ಗೈ.ಹಾ. 94/2003-04 ದಿನಾಂಕ: 28-12-2007, 23-11-2009 ಮತ್ತು 11-02-2011

2) ಈ ಕಛೇರಿಯ ನೋಟೀಸ್ ಪತ್ರ ಸಮ ಸಂಖ್ಯೆ ದಿ: 1-03-2011,

3) ಈ ಕಛೇರಿಯ ಆದೇಶ ಪತ್ರ ಸಮ ಸಂಖ್ಯೆ ದಿನಾಂಕ: 29-06-2011

4) ವಿಚಾರಣಾಧಿಕಾರಿಗಳ ವರದಿ ದಿನಾಂಕ: 7-11-2011

5) ಈ ಪ್ರಾಧಿಕಾರದ ನೋಟೀಸ್ ಪತ್ರ ಸಮ ಸಂಖ್ಯೆ ದಿನಾಂಕ: 29-06-2011

6) ಶ್ರಿ.ಜಿ.ಕೆ.ಮಾದರ್, ಸಹ ಶಿಕ್ಷಕರು, ಇವರ ಮನವಿ ದಿನಾಂಕ: 13-01-2012

7) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸೇ.ಇ.ವಿ. 2001, ಬೆಂಗಳೂರು, ದಿನಾಂಕ: 14-09-2001

***

**ಪ್ರಸ್ತಾವನೆ:–**

ಶ್ರೀ.ಜಿ.ಕೆ.ಮಾದರ್, ಸಹ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಷಂಷೀಪುರ, ಹರಿಹರ ತಾಲ್ಲೂಕು ಆದ ಇವರು ದಿನಾಂಕ:16-01-2006 ರಿಂದ 10-03-2008, 05-06-2008 ರಿಂದ 29-06-2008, 17-07-2008 ರಿಂದ 20-07-2008 08-08-2008 ರಿಂದ 23-09-2008 ಹಾಗೂ 30-10-2008 ರಿಂದ ದಿನಾಂಕ: 11-02-2011 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹರಿಹರ ರವರು ಉಲ್ಲೇಖ [1]ರ ದಿನಾಂಕ: 11-02-2011ರ ಪತ್ರದಲ್ಲಿ ಈ ಪ್ರಾಧಿಕಾರಕ್ಕೆ ವರದಿ ಮಾಡುವ ದಿನಾಂಕದವರೆಗೆ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗಿರುತ್ತಾರೆ ಎಂದು ಶಿಸ್ತು ಕ್ರಮಕ್ಕಾಗಿ ಶಿಫರಸ್ಸು ಮಾಡಿರುತ್ತಾರೆ.

ಈ ಅನಧೀಕೃತ ಗೈರುಹಾಜರಿ ಆರೋಪಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಉಲ್ಲೇಖ [2]ರಲ್ಲಿ ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ] ನಿಯಮಗಳು 1957ರಡಿ ದೋಷಾರೋಪಣಾ ಪಟ್ಟಿ ಅನುಬಂಧ 1 ರಿಂದ 4ನ್ನು ಈ ಪ್ರಾಧಿಕಾರದ ದಿನಾಂಕ: 01-03-2011ರ ನೋಟೀಸ್ ಪತ್ರದ ಮೂಲಕ ಜಾರಿಗೊಳಿಸಿ ಆರೋಪವನ್ನು ಒಪ್ಪಿಕೊಳ್ಳುವ ಅಥವಾ ಒಪ್ಪಿಕೊಳ್ಳದಿರುವಿಕೆ ಕುರಿತು ದಾಖಲೆಗಳೊಂದಿಗೆ ಹೇಳಿಕೆಯನ್ನು ಸಲ್ಲಿಸಲು ನಿರ್ದೇಶನ ನೀಡಲಾಗಿತ್ತು. ದಿನಾಂಕ: 27-04-2011 ರಂದು ಸದರಿ ನೋಟೀಸ್ ಪ್ರತಿಯನ್ನು ಖುದ್ದಾಗಿ ಶ್ರೀ.ಜಿ.ಕೆ.ಮಾದರ್, ಸಹ ಶಿಕ್ಷಕರು ಸಹಿ ಮಾಡಿ ಸ್ವೀಕರಿಸಿದ್ದು ಹೇಳಿಕೆಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ.

ಸದರಿ ಶಿಕ್ಷಕರು ದಿನಾಂಕ: 27-04-2011 ರಂದು ನೋಟೀಸ್ ಪತ್ರವನ್ನು ಸ್ವತಃ ಪಡೆದಿದ್ದು ನಿಗಧಿತ ಅವಧಿಯಲ್ಲಿ ಹೇಳಿಕೆಯನ್ನು ಸೂಕ್ತ ದಾಖಲೆಗಳೊಂದಿಗೆ ಈ ಪ್ರಾಧಿಕಾರಕ್ಕೆ ಸಲ್ಲಿಸದೇ ಇರುವುದರಿಂದ ಹಾಗೂ ಸದರಿಯವರ ಗೈರುಹಾಜರಿ ಅವಧಿಯು ದೀರ್ಘಾವಧಿಯಿಂದ ಕೂಡಿರುವುದರಿಂದ ವಿಚಾರಣಾ ಪ್ರಾಧಿಕಾರ ರಚಿಸಿ ವಿಚಾರಣೆ ನಡೆಸಿ ವರದಿಯನ್ನು ಪಡೆದು ನಂತರ ಕ್ರಮ ಕೈಗೊಳ್ಳಲು ತೀರ್ಮಾನಿಸಿ ಉಲ್ಲೇಖ [3]ರ ಆದೇಶದಲ್ಲಿ ವಿಚಾರಣಾ ಪ್ರಾಧಿಕಾರ ರಚಿಸಿ ದೋಷಾರೋಪಣೆಯಲ್ಲಿನ ಆರೋಪದ ಕುರಿತು ವಿಚಾರಣೆ ನಡೆಸಿ ವರದಿ ಸಲ್ಲಿಸಲು ನಿರ್ದೇಶನ ನೀಡಲಾಗಿತ್ತು.

ಉಲ್ಲೇಖ [4] ರಲ್ಲಿ ವಿಚಾರಣಾಧಿಕಾರಿಗಳು ವರದಿಯನ್ನು ಸಲ್ಲಿಸಿರುತ್ತಾರೆ, ಸದರಿ ವರದಿಯನ್ನು ಪರಿಶೀಲಿಸಲಾಗಿ ಸದರಿ ಶಿಕ್ಷಕರು ವಿಚಾರಣಾಧಿಕಾರಿಗಳು, ದಿನಾಂಕ: 29-07-2011, 17-08-2011 ಹಾಗೂ 08-09-2011 ರಂದು ಮೂರುಸಾರಿ ವಿಚಾರಣಾ ದಿನಾಂಕವನ್ನು ನಿಗಧಿಪಡಿಸಿ ವಿಚಾರಣೆಗೆ ಹಾಜರಾಗಲು ಸೂಚಿಸಿದರೂ ಆಪಾದಿತ ಶಿಕ್ಷಕರು ವಿಚಾರಣೆಗೆ ಹಾಜರಾಗಿರುವುದಿಲ್ಲ, ಆದರೆ

ಸಾಕ್ಷಿಗಳ ಹೇಳಿಕೆ ಹಾಗೂ ದಾಖಲೆಗಳಿಂದ ಇವರ ಮೇಲಿನ ಅನಧೀಕೃತ ಗೈರುಹಾಜರಿ ಆರೋಪವು ಸಾಬೀತಾಗಿರುವುದಾಗಿ ದೃಡಪಡಿಸಿರುತ್ತಾರೆ.

ಸದರಿ ಶಿಕ್ಷಕರಿಗೆ ಇನ್ನೊಂದು ಅವಕಾಶವನ್ನು ನೀಡಿ ವಿಚಾರಣಾ ವರದಿಯನ್ನು ಉಲ್ಲೇಖ [5]ರ ಎರಡನೇ ನೋಟೀಸ್ ಮೂಲಕ ಜಾರಿಗೊಳಿಸಿ ವಿಚಾರಣಾ ವರದಿಯ ಮೇಲೆ ಸಮರ್ಥನೀಯ ಹೇಳಿಕೆಯು ಏನಾದರೂ ಇದ್ದಲ್ಲಿ ಸೂಕ್ತ ದಾಖಲೆಗಳೊಂದಿಗೆ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ಸೂಚನೆ ನೀಡಲಾಗಿತ್ತು.

ದಿನಾಂಕ: 30-12-2011 ರಂದು ಎರಡನೇ ನೋಟೀಸನ್ನು ಸ್ವತಃ ಶಿಕ್ಷಕರೇ ಪಡೆದಿದ್ದು, ನಿಗಧಿತ ಅವಧಿಯೊಳಗೆ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಉಲ್ಲೇಖ [6]ರಲ್ಲಿ ಮನವಿಯನ್ನು ಸಲ್ಲಿಸಿ ಎರಡನೇ ನೋಟೀಸಿಗೆ ಪ್ರತ್ಯುತ್ತರ ಕೊಡಲು ಮಾನಸಿಕ ಹಾಗೂ ದೈಹಿಕವಾಗಿ ಅಸಮರ್ಥನಾಗಿದ್ದ ಕಾರಣ ನಾನು ಯಾವುದೇ ಮನವಿಯನ್ನು ಸಲ್ಲಿಸಲು ಅಶಕ್ತನಾಗಿದ್ದೆನು ಈಗ ಸ್ವಲ್ಪ ಪ್ರಮಾಣದಲ್ಲಿ ಚೇತರಿಕೆ ಕಂಡುಬಂದಿದ್ದರಿಂದ ವೈಧ್ಯರ ಪ್ರಮಾಣ ಪತ್ರವನ್ನು ಸಲ್ಲಿಸುತ್ತಿದ್ದೇನೆ ಎಂದು [ವೈಧ್ಯಕೀಯ ಪ್ರಮಾಣ ಪತ್ರ ಸಲ್ಲಿಸಿರುವುದಿಲ್ಲ] ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಲು ಕೋರಿರುತ್ತಾರೆ.

ಸದರಿ ಶಿಕ್ಷಕರ ಹೇಳಿಕೆಯನ್ನು ಪರಿಶೀಲಿಸಲಾಗಿ ಅನಧೀಕೃತ ಗೈರುಹಾಜರಿ ಆರೋಪ ದೃಡಪಟ್ಟಿದ್ದು, ಈ ಆರೋಪವನ್ನು ಅಲ್ಲಗಳೆಯಲು ಸೂಕ್ತವಾದ ಹೇಳಿಕೆ ಹಾಗೂ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ ಮತ್ತು ಇವರ ಅನಧೀಕೃತ ಗೈರುಹಾಜರಿ ದಿನಾಂಕ:16-01-2006 ರಿಂದ 10-03-2008, 05-06-2008 ರಿಂದ 29-06-2008, 17-07-2008 ರಿಂದ 20-07-2008 08-08-2008 ರಿಂದ 23-09-2008 ಹಾಗೂ 30-10-2008 ರಿಂದ ಸತತವಾಗಿ ಮೂರು ವರ್ಷ ಹಾಗೂ ಒಟ್ಟಾರೆ ಐದು ವರ್ಷಕ್ಕೂ ಅಧಿಕಕಾಲ ಅನಧೀಕೃತವಾಗಿ ಗೈರುಹಾಜರಾಗಿರುವುದನ್ನು ಪರಿಶೀಲಿಸಿ ಉಲ್ಲೇಖ [7]ರ ಸರ್ಕಾರದ ಆದೇಶದಂತೆ ಈ ಕೆಳಕಂಡಂತೆ ಆದೇಶ,

**ಆದೇಶ:–**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ.ಬಿ.ಎ.ರಾಜಶೇಖರ, ಶಿಸ್ತು ಪ್ರಾಧಿಕಾರಿ ಹಾಗೂ ಉಪನಿರ್ದೇಶಕ [ಆಡಳಿತ] ಆದ ನಾನು ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ] ನಿಯಮಗಳು 1957ರ ನಿಯಮ 7 ರಲ್ಲಿ ಹಾಗೂ 9 ರಲ್ಲಿನ [‘ಗ’ ಮತ್ತು ‘ಪ’ ನಲ್ಲಿನ] ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 108 ರ ರಿತ್ಯಾ ಶ್ರೀ.ಜಿ.ಕೆ.ಮಾದರ್, ಸಹ ಶಿಕ್ಷಕರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಷಂಷೀಪುರ, ಹರಿಹರ ತಾಲ್ಲೂಕು ರವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ. ಇವರ ಅನಧೀಕೃತ ಗೈರುಹಾಜರಿ ಅವಧಿಯನ್ನು ಕರ್ತವ್ಯದಲ್ಲಿಲ್ಲದ ಅವಧಿ ಎಂದು ಪರಿಗಣಿಸಿದೆ.

**ಬಿ.ಎ.ರಾಜಶೇಖರ,**
ಶಿಸ್ತು ಪ್ರಾಧಿಕಾರಿ ಹಾಗೂ ಉಪನಿರ್ದೇಶಕ [ಆಡಳಿತ]
ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ

ಪಿ.ಆರ್. **408**

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/170/2011–12, ದಿನಾಂಕ: 09/03/2012**

ಉಪಸ್ಥಿತರು:– **ಎನ್. ಚಂದ್ರಶೇಖರ್,** ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.

| **ಪಿರ್ಯಾದುದಾರರು:–** | –ವಿರುದ್ಧ– | **ಆರೋಪಿ:–** |
|---|---|---|
| ಆರಕ್ಷಕ ನಿರೀಕ್ಷಕರು,<br>ಅಬಕಾರಿ ಜಾರಿ ಮತ್ತು ಲಾಟರಿ ನಿಷೇದ ದಳ,<br>ಚಿಕ್ಕಬಳ್ಳಾಪುರ. | | ನರಸಿಂಹಪ್ಪ ಬಿನ್ ಲೇ॥ ಸತ್ಯಪ್ಪ,<br>ವಿರುಪಸಂದ್ರ ಗ್ರಾಮ, ಬೈಚಾಪುರ ಗ್ರಾ.ಪಂ.<br>ಗೌರಿಬಿದನೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:–**

ದಿನಾಂಕ:18/10/2011 ರಂದು ಚಿಕ್ಕಬಳ್ಳಾಪುರ ಜಿಲ್ಲೆಯ ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ವಿಶೇಷ ಪೊಲೀಸ್ ಠಾಣೆಯ ಆರಕ್ಷಕ ನಿರೀಕ್ಷಕರು ಇವರಿಗೆ ಬಂದ ಖಚಿತ ಬಾತ್ಮೀಯ ಮೇರೆಗೆ ಸಿಬ್ಬಂದಿಯೊಂದಿಗೆ ಸರ್ಕಾರಿ ವಾಹನ ನೊಂದಣಿ ಸಂ:ಕೆಎ–40 ಜಿ–270 ರಲ್ಲಿ ಗೌರಿಬಿದನೂರು ತಾಲ್ಲೂಕು ಎಳಪಿ ಗ್ರಾಮದಿಂದ ದ್ಯಾವಗಾನಹಳ್ಳಿಗೆ ಹೋಗುವ ರಸ್ತೆಯ ಕೆರೆ ಅಂಗಳ ರಸ್ತೆಯಲ್ಲಿ ಜೀಪನ್ನು ಸ್ವಲ್ಪ ದೂರದ ಮರೆಯಲ್ಲಿ ನಿಲ್ಲಿಸಿ ರಸ್ತೆಕಾವಲು ಕಾಯುತ್ತಿದ್ದಾಗ ಒಬ್ಬ ಆಸಾಮಿಯು ತನ್ನ ದ್ವಿಚಕ್ರ ವಾಹನದ ಹಿಂಭಾಗದ ಎರಡೂ ಕಡೆ ಒಂದೊಂದು ಕ್ಯಾನ್ ಕಟ್ಟಿಕೊಂಡು ಮತ್ತೊಂದು ಕ್ಯಾನ್ ಚಾಲಕನ ಮುಂಭಾಗ ಇಟ್ಟುಕೊಂಡು ಬರುತ್ತಿದ್ದು, ಪೊಲೀಸರು ಸದರಿ ವಾಹನವನ್ನು ತಡೆದು ನಿಲ್ಲಿಸಿ ವಿಚಾರ ಮಾಡಲಾಗಿ ತನ್ನ ಹೆಸರು ನರಸಿಂಹಪ್ಪ ಬಿನ್

ಲೇ॥ ಸತ್ಯಪ್ಪ, ವಿರುಪಸಂದ್ರ, ಗೌರಿಬಿದನೂರು ತಾಲ್ಲೂಕು ಎಂದು ತಿಳಿಸಿದ್ದು, ಕ್ಯಾನ್‌ನಲ್ಲಿದ್ದ ದ್ರವದ ಬಗ್ಗೆ ವಿಚಾರಿಸಲಾಗಿ ಅದಕ್ಕೆ ಆಸಾಮಿಯು ಅದು ಸೇಂದಿ ಎಂದು ತಿಳಿಸಿದನು. ಸೇಂದಿ ಸಾಗಾಣಿಕೆ ಪರವಾನಿಗೆ ವಗೈರೆ ಇದೆಯೇ ಎಂದು ಕೇಳಿದಾಗ ಅವುಗಳು ತನ್ನ ಬಳಿ ಇಲ್ಲವೆಂದು ತಿಳಿಸಿದನು. ನಂತರ ಪೊಲೀಸರು ಪಂಚರ ಸಮಕ್ಷಮ ಪ್ರತ್ಯೇಕವಾಗಿ ಪ್ರತಿ ಕ್ಯಾನ್‌ನಿಂದ ಸೇಂದಿಯನ್ನು ರಸಾಯನಿಕ ಪರೀಕ್ಷೆಗಾಗಿ ಕಳುಹಿಸುವ ಸಲುವಾಗಿ 180 ಎಂಎಲ್‌ನ ಬಾಟಲಿನಲ್ಲಿ ತುಂಬಿ ಮುಚ್ಚಳ ಹಾಕಿ ಬಿಳಿ ಬಟ್ಟೆಯಿಂದ ಸುತ್ತಿ ದಾರದಿಂದ ಕಟ್ಟಿ "ಎನ್" ಎಂಬ ಅಕ್ಷರದಿಂದ ಮೊಹರು ಮಾಡಿ, ಒಂದೊಂದು ಕ್ಯಾನ್‌ನಲ್ಲಿ 40 ಲೀ. ನಂತೆ 3 ಕ್ಯಾನ್‌ಗಳಲ್ಲಿ ಒಟ್ಟು 120 ಲೀ. ಸೇಂದಿ ಇರುತ್ತದೆ. ವಶಪಡಿಸಿಕೊಂಡ ಸೇಂದಿಯನ್ನು ಸರಿಯಾಗಿ ಸಾಗಾಣಿಕೆ ಮಾಡಲು ಸಾಧ್ಯವಾಗದ ಕಾರಣ ಪಂಚಾಯ್ತಿದಾರರಾದ ಪಂಚರ ಅಭಿಪ್ರಾಯ ಪಡೆದು ಸ್ಥಳದಲ್ಲಿ ನಾಶಪಡಿಸಲಾಗಿದ್ದು, ನಂತರ ದ್ವಿಚಕ್ರ ವಾಹನದ ಬಗ್ಗೆ ಅಜಮಾಯಿಷಿ ನೋಡಲಾಗಿ ಅದು ಕಪ್ಪು ಬಣ್ಣದ ಸುಜುಕಿ ಸಮರಾಯಿ ಆಗಿದ್ದು, ನೊಂದಣಿ ಸಂ:ಕೆಎ-03 ಜೆ-7551 ಆಗಿದ್ದು, ಕೊನೆಯ 1 ಸಂಖ್ಯೆ ಅಳಿಸಿದಂತೆ ಕಾಣುತ್ತೆ. ವಾಹನದ ದಾಖಲಾತಿಗಳ ಬಗ್ಗೆ ವಿಚಾರ ಮಾಡಲಾಗಿ ಈ ವಾಹನವು ತನ್ನ ತಮ್ಮ ಮಲ್ಲೇಶಪ್ಪ, ವಿರುಪಸಂದ್ರ ಗ್ರಾಮ ಇವರಿಗೆ ಸೇರಿರುತ್ತದೆ ಎಂದು ತಿಳಿಸಿದನು. ಸದರಿ ಆರೋಪಿಯು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 32,34, 43(ಎ) ರ ರೀತ್ಯಾ ಶಿಕ್ಷಾರ್ಹ ಅಪರಾಧ ಮಾಡಿರುವುದರಿಂದ ಈ ಬಗ್ಗೆ ತಕ್ಷೀರು ಸಂ:83/2011, ದಿನಾಂಕ:18/10/2011 ರಲ್ಲಿ ಮೊಕದ್ದಮೆ ದಾಖಲಿಸಿಕೊಂಡು ನಂತರ ಪ್ರಮಾವರದಿಯೊಂದಿಗೆ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ತದನಂತರ ಪ್ರ.ಮಾ.ವ. ಮಹಜರ್ ಹಾಗೂ ಪಿ.ಎಫ್‌ನ್ನು ಪ್ರಾಧಿಕಾರಕ್ಕೆ ಸಲ್ಲಿಸಿ ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡಿರುವ ವಸ್ತುಗಳ ಪಟ್ಟಿ ನಂ:80/2011 ರಲ್ಲಿ ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರ ಮಾಡಲು ಪ್ರಾಧಿಕಾರದಿಂದ ಅನುಮತಿ ನೀಡಲಾಗಿದೆ.

ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ಇವರು ಜಪ್ತುಪಡಿಸಿರುವ 120 ಲೀ. ಸೇಂದಿಯನ್ನು ಸ್ಥಳದಲ್ಲಿಯೇ ಪಂಚರ ಸಮಕ್ಷಮ ನಾಶಪಡಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ತನಿಖೆಯನ್ನು ಮುಂದುವರೆಸಿ ಪ್ರಕರಣದಲ್ಲಿ ಆರೋಪಿಗೆ ಈ ಪ್ರಾಧಿಕಾರದಿಂದ ದಿನಾಂಕ:18/11/2011 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ರೀತ್ಯಾ ಕಾರಣ ಕೇಳಿ ನೋಟೀಸ್‌ನ್ನು ಜಾರಿ ಮಾಡಿ ಸ್ವೀಕೃತಿಯನ್ನು ಪಡೆಯಲಾಗಿರುತ್ತದೆ. ನಂತರ ಜಪ್ತು ಮಾಡಿರುವ ಸುಜುಕಿ ಸಮರಾಯಿ ದ್ವಿಚಕ್ರ ವಾಹನ ನೊಂದಣಿ ಸಂ: ಕೆಎ-03 ಜೆ-7551 ರ ಮಾಲೀಕರ ಬಗ್ಗೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದರಿ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ಸುರೇಶ್ ಕುಮಾರ್ ಆರ್. ಬಿನ್ ವಿ.ಜಿ. ರಾಘವನ್ ನಾಯರ್, 6ನೇ ಹಂತರ, ವೆಂಕಟೇಶ್ವರ ಕಾಲೋನಿ ಹತ್ತಿರ, ತಿಪ್ಪಸಂದ್ರ, 3ನೇ ಹಂತ, ಬೆಂಗಳೂರು ಎಂದು ವರದಿಯ ಮೇರೆಗೆ ಸದರಿ ನೊಂದಣಿ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:12/12/2011 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ಪ್ರಕಾರ ಕಾರಣ ಕೇಳಿ ನೋಟೀಸ್‌ನ್ನು ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ನೋಟೀಸ್ ಜಾರಿಯಾಗದೇ ಈ ಕಛೇರಿಗೆ ವಾಪಸ್ಸು ಬಂದಿರುತ್ತದೆ. ಸದರಿ ನೋಟೀಸ್‌ನ್ನು ಮಾಲೀಕರಿಗೆ ಜಾರಿ ಮಾಡಲು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ರವಾನಿಸಿ ನಿರ್ದೇಶನ ನೀಡಿದ್ದು, ಅದರಂತೆ ವಲಯ ಕಛೇರಿಯ ಅಬಕಾರಿ ರಕ್ಷಕರಾದ ಶ್ರೀ ಎ.ಕೆ. ಹನುಮಂತರಾಯಗೌಡ ರವರು ಮಾಲೀಕರ ವಿಳಾಸಕ್ಕೆ ಖುದ್ದು ಭೇಟಿ ನೀಡಿ ಮಾಲೀಕರ ವಾಸದ ಮನೆ ಸಂಖ್ಯೆ ಬಗ್ಗೆ ಅಲ್ಲಿನ ನಿವಾಸಿಗಳನ್ನು ವಿಚಾರಿಸಿದ್ದು, ಸದರಿಯವರು ಆ ಸ್ಥಳದಲ್ಲಿ ಇಲ್ಲದೇ ಇರುವುದರಿಂದ ನೋಟೀಸ್‌ನ್ನು ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ಷರಾವನ್ನು ನೋಟೀಸ್‌ನ ಹಿಂಬದಿಯಲ್ಲಿ ನಮೂದಿಸಿದ್ದು, ಈ ಪತ್ರವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರ ದಿನಾಂಕ:10/01/2012 ರ ಪತ್ರದಲ್ಲಿ ಅಡಕವಿರಿಸಿ ಬೆಂಗಳೂರುನಲ್ಲಿರುವ " ತಿಪ್ಪಸಂದ್ರ " ನಗರ ಪ್ರದೇಶವಾಗಿದ್ದು, ಇಲ್ಲಿ ಮಾಲೀಕರ ಮನೆ ನಂಬರ್ ಮತ್ತು ಕಟ್ಟಡದ ವಿಳಾಸ ಸರಿಯಾಗಿ ಇಲ್ಲದೇ ಇದಲ್ಲಿ ಅಂತಹ ವಿಳಾಸವನ್ನು ಪತ್ತೆ ಮಾಡಲು ಸಾಧ್ಯವಾಗಿರುವುದಿಲ್ಲ. ಅಲ್ಲದೇ ವಾಹನ ಜಪ್ತಾಗಿ ಸುಮಾರು 3 ತಿಂಗಳು ಕಳೆದರೂ ವಲಯ ಕಛೇರಿಗೆ ವಾಹನದ ಬಗ್ಗೆ ಹಕ್ಕು ಚಲಾಯಿಸಿ ಮೂಲ ದಾಖಲಾತಿಗಳೊಂದಿಗೆ ಯಾರೂ ಹಾಜರಾಗಿರುವುದಿಲ್ಲ. ಆದಕಾರಣ ವಾಹನವನ್ನು ಹೀಗೆ ಉಳಿಸಿಕೊಂಡಲ್ಲಿ ಅದರ ಮೌಲ್ಯ ಕಡಿಮೆಯಾಗಿ ಸರ್ಕಾರದ ರಾಜಸ್ವಕ್ಕೆ ದಕ್ಕೆಯಾಗುತ್ತದೆ. ಆದಕಾರಣ ವಾರಸುದಾರರು ಬಾರದೇ ಇರುವುದರಿಂದ ಸದರಿ ಸುಜುಕಿ ಸಮುರಾಯಿ ನೊಂದಣಿ ಸಂ: ಕೆಎ-03 ಜೆ-7551 ರ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ: 09/03/2012 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಇಲ್ಲಿಯತನಕ ಯಾರೂ ಹಾಜರಾಗಿರುವುದಿಲ್ಲ. ದಾಖಲೆಗಳು, ಪ್ರ.ಮಾ.ವ. ಮಹಜರ್‌ನ್ನು ಪರಿಶೀಲಿಸಲಾಗಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಚಿಕ್ಕಬಳ್ಳಾಪುರ ಇವರು ದಿನಾಂಕ:12/12/2011 ರಂದು ಗೌರಿ ಗೌರಿಬಿದನೂರು ತಾಲ್ಲೂಕು ಎಳಪಿ ಗ್ರಾಮದಿಂದ ದ್ಯಾವಗಾನಹಳ್ಳಿಗೆ ಹೋಗುವ ರಸ್ತೆಯ ಕೆರೆ ಅಂಗಳ ರಸ್ತೆಯಲ್ಲಿ ರಸ್ತೆಕಾವಲು ಮಾಡುತ್ತಿದ್ದಾಗ ಸುಜುಕಿ ಸಮರಾಯಿ ನೊಂದಣಿ ಸಂ:ಕೆಎ-03 ಜೆ-7551 ರ ದ್ವಿಚಕ್ರ ವಾಹನದಲ್ಲಿ 120 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಸಾಬೀತಾಗಿರುತ್ತದೆ. ಅಲ್ಲದೆ ರಾಸಾಯನಿಕ ತಜ್ಞರ ವರದಿಯನ್ವಯ ಜಪ್ತುಪಡಿಸಿರುವ ಸೇಂದಿಯಲ್ಲಿ ಈಥೈಲ್ ಆಲ್ಕೋಹಾಲ್ ಮತ್ತು ಕ್ಲೋರೈಡ್ ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಎನ್. ಚಂದ್ರಶೇಖರ್, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಲಾಗಿದ್ದು, ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಚಿಕ್ಕಬಳ್ಳಾಪುರ ರವರ ದಿನಾಂಕ:12/12/2011 ರ ಪ್ರ.ಮಾ.ವ.ಸಂಖ್ಯೆ 83/2011 ರಲ್ಲಿ ಜಪ್ತುಪಡಿಸಿರುವ ಸುಜುಕಿ ಸಮರಾಯಿ ನೊಂದಣಿ ಸಂ:ಕೆಎ–03 ಜೆ–7551 ರ ಇಂಜಿನ್ ನಂ:7212ಎಂ368222, ಚಾಸೀಸ್ ನಂ:7212ಎಫ್347966 ರ ದ್ವಿಚಕ್ರ ವಾಹನವನ್ನು ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ: 09/03/2012 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಆವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಎನ್. ಚಂದ್ರಶೇಖರ್,**
ಪ್ರಾಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪಆಯುಕ್ತರು,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪಿ.ಆರ್. 425**

## IN THE COURT OF 2ND ADDITIONAL CHIEF METROPOLITAN MAGISTRATE, BANGALORE CITY

It hereby notified to the public that the Jayanagara Police Station, Bangalore city have seized the following vehicles as unclaimed and such vehicles are lying in the Police Station as unclaimed so far, I Hence the owner of the properties (Vehicles) may put their claim one month from the date of publication.

**Bangalore**
**09/01/2012**

**2ND ACM MAGISTRATE,**
**Bangalore City.**

**List of the seized vehicles are lying in the Jayanagara Police Station , Bangalore City whichi have been seized under Cr. Nos.**

| Sl No | Vehicle | Colour | R.No | Engine No. | Chassis No. | Cr.No. | P.F No. |
|---|---|---|---|---|---|---|---|
| 1 | Hero Honda Splendor | Black colour | KA-02 ES-8564 | 05H15M29722 | 05H160C3215 | 315/10 | 90/2010 |
| 2 | Suxukii Samurai | Green | KA-05 EA-5484 | 7903M323261 | 7903F274997 | 38/2010 | 25/2010 |
| 3 | Bajaj Discover. | Black | KA-05 EZ-9117 | DSGBNE37882 | MD2DSD522NCE58937 | 98/11 | 53/11 I.No-3 |
| 4 | TVS Victor | Black | KA-05 EW-4151 | 0F1C51379161 | MD625AF135210575 | 377/10 | 122/10 |
| 5 | Yamaha Entizer | Black | KA-05 EK-6174 | 5US007319 | 02H50S007319 | 49/11 | 49/11 I.No-3 |
| 6 | Bajaj Avenger. | Black | KA-03 EY-5134 | DVGBNL32419 | MD20DGZZNEL19025 | 49/11 | 49/11 I.No-4 |
| 7 | TVS Victor GX | Red | KA-03 EU-8031 | 0FIN51486574 | MD625AF1951997434 | 49/11 | 49/11 I.No-1 |
| 8 | Hero Honda Splendor | Black | KA-03 EE-8991 | 01M18127217 | 01M20F42410 | 98/11 | 53/11 I.No-4 |
| 9 | Bajaj Pulsor | Red | | DHGBKE56474 | DHVBKE56417 | 98/11 | 50/11 |

| Sl No | Vehicle | Colour | R.No | Engine No. | Chassis No. | Cr.No. | P.F No. |
|---|---|---|---|---|---|---|---|
| 10 | Hero Honda CD 100 | | CKI-450 | A10E018631 | NOT | 401/10 | 132/2010 |
| 11 | Honda Activa | Black | KA-05 EF-5464 (Ori) KA-05 HA-16 (Dup) | JF08E8408463 | ME4JF082E68229602 | 230/11 | 134(a)/11 I. No: 3 |
| 12 | Honda Activa | Silver | KA-04 EJ-3954 | JF08E-D585817 | ME4JF085J48570412 | 230/11 | 134a)/11, I.No: 2 |
| 13 | Bajaj Pulsor | Black | KA-02 E-5894 | DHGBMM17107 | MD2DHDH77MCH79848 | 230/11 | 133(a)/11,I.No: 3 |
| 14 | TVS Star City | Blue & Black | KA-05 E-7016 | AF1KA1312067 | MD625MF13A1K80315 | 230/11 | 142/11, I.No-1 |
| 15 | H/H Splendor Plus. | Black | KA-42 H-5581 | 05M15E12541 | 05M16F14130 | 230/11 | 143/11, I.No-3 |
| 16 | TVS Victor GL | Blue & Black | KA-02 E-519 | N3305M535335 | N3305F530001 | 230/11 | 143/11, I.No-2 |
| 17 | Hero Honda Splendor | Black | KA-05 H-5882 | | 02A20C20115 | 230/11 | 135/11, I.No-2 |
| 18 | Hero Honda Splendor | Black | No Number Plate | 06B15M21084 | 06B16C23427 | 230/11 | 143/11, I.No-6 |
| 19 | Hero Honda Splendor | Yellow | No Number Plate | 01D18E230445 | 01D20F203103 | 230/11 | 143/11, I.No-1 |
| 20 | H/H Splendor Plus. | Black & Grey | KA-05 EM7273 | 00H18M17540 | 00H20C18231 | 230/11 | 141/11, I.No-2 |
| 21 | Yamaha RX. | N/blue | CKJ-831 | 1L5020726 | 96G115020726 | 230/11 | 142/11, I.No-3 |
| 22 | H/H Splendor | Black | KA-01 U-3038 | 02E18M08509 | 02E20C15247 | 230/11 | 133(a)/11,I.No: 2 |
| 23 | H/H Splendor Plus. | Black & Gray | KA-51 B-2281 | 04D15M14503 | 04D16C21247 | 230/11 | 141/11 , I.No-1 |
| 24 | H/H Splendor Plus. | Black | KA-42 J-3942 | 06H1539932 | 06H16F40438 | 230/11 | 141/11, I. No-5 |
| 25 | Bajaj Pulsor | Black | KA-51 J-1403 | DHGBNA62988 | MD2DHDHZZNCA25577 | 230/11 | 142/11, I. No-2 |
| 26 | Yamaha FZ | Purple | KA-05 HH5727 | JC44E0001345 | ME4JC445C98001388 | 230/11 | 133(a)/11,I. No:4 |
| 27 | Hero Honda Splendor | | KA-42 E-229 | 05105K15E19530 | 05K16521833 | 230/11 | 137/11, I. No-4 |
| 28 | H/H Splendor + | | KA-51 S-6689 | 01G18M13980 | 01G20C14186 | 230/11 | 133(a), I. No: 1 |
| 29 | Bajaj Pulsor | Black | KA-08 J-1466 | DHGBME35873 | DHVBME37025 | 230/11 | 143/11, I. No-4 |

| Sl No | Vehicle | Colour | R.No | Engine No. | Chassis No. | Cr.No. | P.F No. |
|---|---|---|---|---|---|---|---|
| 30 | Bajaj KB-100 | | KA-03 Q-685 | 30M95C16277 | 30F95C13435 | 213/11 | 118/11, I. No:2 |
| 31 | K Bajaj | | KA-02 E-5374 | 3195J40652 | 31F95J38297 | 288/11 | 225/11, I-13 |
| 32 | Kinetic Honda | Silver | KA-05 E-3191 | N1FJD427959 | | 288/11 | 225/11, I-14 |
| 33 | Kawasaki Boxer | Silver | KA-05 EQ-6405 | DMMBKH18664 | DFFBKH30479 | 288/11 | 225/11, I-15 |
| 34 | Honda Dio | Black | KA-05 EU-9900 | ME4J6042465 | | 288/11 | 225/11, I-16 |
| 35 | Kinetic Honda Z/X | Black | KA-05 W-2008 | | | 288/11 | 225/11, I-17 |
| 36 | H/H Splendor | Black&Orange | | 02D18E11574 | 02D2DF14279 | 288/11 | 225/11, I-18 |
| 37 | H/H Splendor | Black | KA-04 8943 | Rubbed | 02M20F33379 | 288/11 | 225/11, I-4 |
| 38 | Suzuki Samurai | Black | KA-05 EB-64 | 7907M411981 | 7907F362757 | 288/11 | 225/11, I-8 |
| 39 | TVS XL Heavy Duty | Green | KA-05 ER-2496 | 0D1B41095661 | MD621BD1241B42933 | 288/11 | 225/11, I-19 |
| 40 | Yamaha RX 135 | Red | KA-05 ED-9833 | LTL538725 | 02J4TL538725 | 288/11 | 225/11, I-3 |
| 41 | Suzuki Samurai | | KA-01 Q-7965 | 7808M146799 | 7808F099426 | 288/11 | 225/11, I-20 |
| 42 | Hero Honda Splendor | | KA-41 H-4986 | Rubbed | 06KACF12499 | 288/11 | 225/11, I-10 |
| 43 | Suzuki Heat | Red | KA-51 K-5320 | F479-146150 | MB8NF4BAL68116899 | 288/11 | 225/11, I-5 |
| 44 | Bajaj Pulsor | Black | KA-20 L-8306 | DHGBJL38541 | DHVBJL38651 | 288/11 | 225/11, I-6 |
| 45 | Honda Activa | Black | KA-05 EM6866 | 0198510 | ME4JF0858381192390 | 288/11 | 225/11, I-7 |
| 46 | Bajaj Pulsor | Black | KA-01 EX-7636 | JEGBTA95769 | MD2JDZZTCA94802 | 288/11 | 225/11, I-11 |
| 47 | Bajaj Pulsor | Blue | KA-01 W-696 | DHGBKG25147 | DHVBKG24964 | 288/11 | 225/11, I-12 |
| 48 | TVS Apache | Blue | KA-04 EQ-3435 | 0E3E62012862 | MD624HE366E13581 | 288/11 | 225/11, I-1 |
| 49 | Yamaha RX | | KA-03 U-7797 | 1L5-118507 | 1L5-118507 | 288/11 | 225/11, I-2 |
| 50 | Honda Activa | Black | KA-41 J-5888 | JF08E-8956511 | ME4JF082G78777531 | 288/11 | 225/11, I-9 |
| 51 | Bajaj Pulsor | | KA-04 ER-7644 | DHGBNA448821 | MD2DHDHZZNCA07735 | C Miss 489/11 | 234/11, I-1 |

| Sl No | Vehicle | Colour | R.No | Engine No. | Chassis No. | Cr.No. | P.F No. |
|---|---|---|---|---|---|---|---|
| 52 | Kinetic Honda Marvel | Green | KA-05 W-1550 | | K1FPG003827 | C Miss 489/11 | 234/11, I-2 |
| 53 | Kinetic Spirit | | KA-01 U-9803 | 29GBJH72910 | | C Miss 489/11 | 234/11, I-3 |
| 54 | K Bajaj | Black | KA-05 H-1275 | 30M94C05875 | 0F94C06895 | C Miss 488/11 | 233/11, I-1 |
| 55 | Bajaj Scooter | | KA-02 2228 | 35HBED43758 | 06FBED79418 | C Miss 488/11 | 233/11, I-2 |
| 56 | H/H CBZ | Black | KA-05 EQ-145 | 03K41M00202 | 03K46V00218 | C Miss 488/11 | 233/11, I-3 |
| 57 | Bajaj CT 100 | Black | KA-05 EY-1568 | DUMBMB14938 | DUFBMB50589 | C Miss 492/11 | 235/11, I-1 |
| 58 | H/H Splendor + | Black | No Number | 95L17E-04592 | 95L19F04639 | C Miss 492/11 | 235/11, I-2 |
| 59 | TVS XL HeavyDuty | Green | KA-05 EQ-8173 | | MD621BD2141A32304 | C Miss 492/11 | 235/11, I-3 |
| 60 | Yamaha | Blue & Yellow | KA-01 K-1634 | 1L1-507126 | 95D1L1-507126 | C Miss 493/11 | 236/11, I-1 |
| 61 | H/H CD-100 | Red | KA-03 X-3763 | Not Clear | Not seen | C Miss 493/11 | 236/11, I-2 |
| 62 | Kinetic Honda | Black | KA-03 Y-2335 | 987922IERH | Rubbed | C Miss 493/11 | 236/11, I-3 |
| 63 | Hero Honda Ambition | Red | KA-01 W-6885 | 04D60M04255 | 04D63C04376 | C Miss 495/11 | 240/11, I-1 |
| 64 | Kinetic Honda | Silver | KA-01 H-1628 | 270112MIED | Rubbed | C Miss 495/11 | 240/11, I-3 |
| 65 | Honda Deo | Silver | | | | C Miss 495/11 | 240/11, I-2 |
| 66 | Suzuki Samurai | Black & Red | KA-02 S-5374 | 7609M743116 | | C Miss 496/11 | 241/11, I-1 |
| 67 | TVS Scooty ES | Black | KA-04 ED-935 | K98H07213209 | K98HF211155 | C Miss 496/11 | 241/11, I-2 |
| 68 | Hero Puch Turbo | | | | | C Miss 496/11 | 241/11, I-3 |
| 69 | Hero Shakti 3G | Red | KA-01Q-3028 | EB616988 | MD398T1BRWC615775 | C miss 498(a)/11 | 242/11, I-1 |
| 70 | Kinetic Honda | Black | KA-05 H-2219 | 10078VLEGH | TEG212445 | C miss 498(a)/11 | 242/11, I-2 |
| 71 | Scooty Pep Oreva | Dark Green | | Rusted | Rusted | C miss 498(a)/11 | 242/11, I-3 |

| Sl No | Vehicle | Colour | R.No | Engine No. | Chassis No. | Cr.No. | P.F No. |
|---|---|---|---|---|---|---|---|
| 72 | Bajaj Chetak | | CKK-9308 | Rusted | Rusted | | 91/01 |
| 73 | Bajaj Chetak | | KA-05 5996 | Rusted | Rusted | 405/05 | 123/05 |
| 74 | Suzuki Samurai | | KA-05 X-3888 | Rusted | Rusted | 138/08 | 49/08 |
| 75 | Bajaj Chetak | | MEO-4379 | Rusted | Rusted | 140/96 | 29/96 |
| 76 | Yamaha RX | | KA-05 A-8483 | Rusted | Rusted | 4/96 | 40/97 |
| 77 | Luna | | CHL-6228 | Rusted | Rusted | | 251/94 |
| 78 | Yamaha RXZ | | - | Not Clear | Not clear | 75/02 | 44/02 |

**Auction Vehicles – Four Wheelers.**

| Sl. N | Vehicle | R.No | Colour | Engine No | Chassis No | Cr.No | P.F No |
|---|---|---|---|---|---|---|---|
| 1 | Maruti Car | KA-34 P3638 | | F8BIMA912513 | SB308IN1296608 | 253/03 U/S 379 IPC | 70/03 |
| 2 | Auto Riksha | KA-03 1906 | | | | 02/09 u/s 392 IPC | 44/09 |
| 3 | Tata Indica | Not | Siver colour | HZZP39552 | 600131HZZP | 401/10 u/s 41 Cl (d) r/w 102 Crpc & 379 IPC | 134/10 |
| 4 | Auto Rikshaw | CAS-1980 | | | | 471/01 | 163/01 |
| 5 | Auto Rikshaw | MYT-5571 | | | | 474/01 | 161/01 |
| 6 | Auto Rikshaw | MYA-9873 | | | | 778/01 | 164/01 |

**2ND ACM MAGISTRATE,**
**Bangalore City.**

**P.R. 358**

## ಚೀಟಿ ನಿಧಿಗಳ ಉಪ ನಿಬಂಧಕರ ನ್ಯಾಯಾಲಯ, ಉತ್ತರ ವಲಯ, ಬೆಂಗಳೂರು ನಗರ ಜಿಲ್ಲೆ, ಮಲ್ಲೇಶ್ವರಂ, ಬೆಂಗಳೂರು–03

**ದಾವ ಸಂಖ್ಯೆ ಡಿಆರ್‌ಬಿ–ಎನ್/ಸಿಎಫ್ಎಸ್/171/2011–12**

**ವಾದಿಗಳು**

ಡಾ॥ವಿಠಲ್ ಗೋನಬಾಳ,
ನಂ.35, 1ನೇ ಮುಖ್ಯರಸ್ತೆ,
ಚಾಲುಕ್ಯನಗರ,
ನಾಗರಬಾವಿ ರಸ್ತೆ,
ಬೆಂಗಳೂರು–560 072.

**ಪ್ರತಿವಾದಿಗಳು**

1. ಶ್ರೀ ವಿಶ್ವನಾಥ್,
ವ್ಯವಸ್ಥಾಪಕ ನಿರ್ದೇಶಕರು,
ಸಮೃದ್ಧಿ ಚಿಟ್ಸ್ ಪ್ರೈವೇಟ್ ಲಿಮಿಟೆಡ್, ನಂ.11, 2ನೇ ಮಹಡಿ, 8ನೇ ಮುಖ್ಯರಸ್ತೆ, (ನ್ಯೂ ಪಬ್ಲಿಕ್ ಹೈಸ್ಕೂಲ್ ಪಕ್ಕ),
ಬಸವೇಶ್ವರನಗರ,
ಬೆಂಗಳೂರು–560 079

2. ಶ್ರೀ ವಿ.ಸುಬ್ರಮಣ್ಯ,
ಫೋರ್‌ಮನ್ ಹಾಗೂ ನಿರ್ದೇಶಕರು,
ಸಮೃದ್ಧಿ ಚಿಟ್ಸ್ ಪ್ರೈವೇಟ್ ಲಿಮಿಟೆಡ್, ನಂ.11, 2ನೇ
ಮಹಡಿ, 8ನೇ ಮುಖ್ಯರಸ್ತೆ, (ನ್ಯೂ ಪಬ್ಲಿಕ್ ಹೈಸ್ಕೂಲ್ ಪಕ್ಕ),
ಬಸವೇಶ್ವರನಗರ,
ಬೆಂಗಳೂರು–560 079

3. ಶ್ರೀ ಎನ್.ಎಸ್. ರಂಗನಾಥ ಗುಪ್ತ, ನಿರ್ದೇಶಕರು
ಸಮೃದ್ಧಿ ಚಿಟ್ಸ್ ಪ್ರೈವೇಟ್ ಲಿಮಿಟೆಡ್,
ನಂ. 1942, 1ನೇ ಮುಖ್ಯರಸ್ತೆ, ಜಯಮುನಿರಾವ್ ಸರ್ಕಲ್
ಹತ್ತಿರ, ಎಂ.ಸಿ.ಲೇಔಟ್, ಬೆಂಗಳೂರು–40.

4. ಶ್ರೀ ಕೆ.ಪಿ. ಪುಷ್ಪರಾಜ್, ನಿರ್ದೇಶಕರು,
ಸಮೃದ್ಧಿ ಚಿಟ್ಸ್ ಪ್ರೈವೇಟ್ ಲಿಮಿಟೆಡ್,
ನಂ. 19/1 ಎ, ಕೆಂಚನಕುಪ್ಪೆ ಕ್ರಾಸ್, ಪೈಪ್‌ಲೈನ್ ಪ್ಯಾರಲಲ್
ರಸ್ತೆ, ನೈಸ್ ರಸ್ತೆ ಹತ್ತಿರ, ಗೊಲ್ಲರಹಟ್ಟಿ, ವಿಶ್ವ ನೀಡಂ
ಪೋಸ್ಟ್, ಬೆಂಗಳೂರು–91.

**1982ನೇ ಚೀಟಿ ನಿಧಿಗಳ ಕಾಯಿದೆಯ ಕಲಂ 68 ರ ಅಡಿಯಲ್ಲಿ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸ್**

1) ವಾದಿಯವರು ಚೀಟಿ ನೀದಿಗಳ ಕಾಯಿದೆಯ ಕಲಂ 64 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು **ರೂ.7,90,110/– (ಏಳು ಲಕ್ಷ ತೊಂಬತ್ತು ಸಾವಿರದ ಒಂದುನೂರ ಹತ್ತು ರೂಪಾಯಿಗಳು ಮಾತ್ರ)** ಗಳನ್ನು ಹಾಗೂ ಸುಸ್ತಿಯಾದ ಅಸಲು **ರೂ.7,30,000/–** ಗಳ ಮೇಲೆ ದಿನಾಂಕ **01–10–2011** ರಿಂದ ಪೂರ್ಣ ಮೊಬಲಗು ಪಾವತಿಸುವವರೆಗೆ ಶೇ.18% ರಂತೆ ಬಡ್ಡಿಯನ್ನು ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ದಾವಾ ಅರ್ಜಿಯನ್ನು ಮೇಲ್ಕಂಡ ಸಂಖ್ಯೆಯಲ್ಲಿ ನೋಂದಾಯಿಸಿಕೊಂಡು ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2) ವಾದಿಯು ಅವರ ದಾವಾ ಅರ್ಜಿಯ ಜೊತೆ 1982ರ ಚೀಟಿ ನಿಧಿಗಳ ಕಾಯಿದೆಯ ಕಲಂ 68 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿ 3 ಇವರ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ಮಾಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿ 3 ಇವರ ಹೆಸರಿನಲ್ಲಿ ಈಗಾಗಲೇ ಅರ್ಜಿಯಲ್ಲಿ ತಿಳಿಸಿರುವಂತೆ ಸ್ಥಿರಾಸ್ತಿಯು ಇರುವುದು ಕಂಡು ಬಂದಿರುತ್ತದೆ.

3) ಪ್ರತಿವಾದಿಗಳು ಅಕ್ರಮವಾಗಿ ಸಮೃದ್ಧಿ ಚಿಟ್ಸ್ ಹೆಸರಿನಲ್ಲಿ ಚೀಟಿ ನಡೆಸುತ್ತಿರುವುದಾಗಿಯೂ ಮತ್ತು ಚಿಟ್ ಫಂಡ್ ಕಾಯಿದೆಯಡಿಯ ಅವಕಾಶಗಳಿಗನುಗುಣವಾಗಿ ಚೀಟಿ ವ್ಯವಹಾರಗಳನ್ನು ನಡೆಸದೆ, ಸಮಾಜ ಸೇವೆಯಲ್ಲಿ ತೊಡಗಿರುವ ವಾದಿಗಳಿಗೆ ಪ್ರತಿವಾದಿಗಳು ಮೋಸದಿಂದ 2 ಚೀಟಿ ಗುಂಪುಗಳಿಗೆ ಚಂದಾದಾರರನ್ನಾಗಿ ಮಾಡಿಕೊಂಡು ಬಿಡ್ ಮಾಡಿದ ನಂತರ ಬಹುಮಾನಿತ ಹಣವನ್ನು ನೀಡದೇ ಮೋಸವೆಸಗಿರುತ್ತರೆ ಎಂದು ಆಪಾದಿಸಿರುತ್ತಾರೆ.

4) 3ನೇ ಪ್ರತಿವಾದಿಯು ಈ ಕೆಳಗಿನ ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡುವ ಉದ್ದೇಶಿಸಿದ್ದು ಈ ರೀತಿ ಆದಲ್ಲಿ ವಾದಿಗಳಿಗೆ ತುಂಬಲಾಗದ ನಷ್ಟವುಂಟಾಗುವುದಾಗಿಯೂ ಮತ್ತು ಈ ನ್ಯಾಯಾಲಯವು ನೀಡಬಹುದಾದ ತೀರ್ಪನ್ನು ಅನುಷ್ಠಾನಗೊಳಿಸಲು ಸಾಧ್ಯವಾಗುವುದಿಲ್ಲವೆಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

5) ಕಲಂ 68 ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಮತ್ತು ದಾಖಲಾತಿಗಳನ್ನು ಕೂಲಂಕಶವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 68 ರ ಅರ್ಜಿಯಲ್ಲಿ ತಿಳಿಸಿರುವ ವಿಷಯಗಳು ಮೇಲ್ನೋಟಕ್ಕೆ ನಿಜವೆಂದು ಕಂಡುಬಂದಿರುತ್ತದೆ. ಅಲ್ಲದೆ 3ನೇ ಪ್ರತಿವಾದಿಯ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತುಗಳನ್ನು ಮಾರಾಟ ಮಾಡದಂತೆ ತಡೆಯದಿದ್ದಲ್ಲಿ ವಾದಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ / ಡಿಕ್ರಿಯನ್ನು ಅನುಷ್ಠಾನಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

6) ವಾದಿ ಪರ ವಕೀಲರ ವಾದವನ್ನು ಆಲಿಸಲಾಯಿತು ಹಾಗೂ ಆದೇಶ ಪೂರ್ವ ಜಪ್ತಿ ಅರ್ಜಿಯೊಂದಿಗೆ ಸಲ್ಲಿಸಿರುವ ಪ್ರಮಾಣ ಪತ್ರದಲ್ಲಿನ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಹಾಗೂ 1982ರ ಚೀಟಿ ನಿಧಿಗಳ ಕಾಯಿದೆಯ ಕಲಂ 68 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ ಸಿಓ/02/ಸಿಎಂಎಲ್/2008 (ಪಿ–2) (2) ದಿನಾಂಕ 29–02–2008 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಡಿ.ಪಾಂಡುರಂಗಪ್ಪ, ಚೀಟಿ ನಿಧಿಗಳ ಉಪ ನಿಬಂಧಕರು, ಉತ್ತರ ವಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು 3ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಚಿಸಿದಲ್ಲಿ **ರೂ.7,90,110/– (ಏಳು ಲಕ್ಷ ತೊಂಬತ್ತು ಸಾವಿರದ ಒಂದುನೂರ ಹತ್ತು ರೂಪಾಯಿಗಳು ಮಾತ್ರ)** ಗಳನ್ನು ಬಡ್ಡಿ ಸಹಿತ ಈ ನ್ಯಾಯಾಲಯವು ಹೊಂದಿರುವ ಬೆಂಗಳೂರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ರಾಮನಗರ ಜಿಲ್ಲೆ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ಚಾಮರಾಜಪೇಟೆ, ಬೆಂಗಳೂರು ಇವರ ಪಿ.ಡಿ ಖಾತೆಗೆ ದಿನಾಂಕ: 26–3–2012 ಅಥವಾ ಅದಕ್ಕಿಂತ ಮುಂಚಿತವಾಗಿ ಜಮಾ ಮಾಡಿ ಅಧಿಕೃತ ಚಲನ್ / ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಜಂಟಿಯಾಗಿ ಅಥವಾ ಪ್ರತ್ಯೇಕವಾಗಿ ಮೇಲೆ ತಿಳಿಸಿದಂತೆ ನಿಗಧಿತ ದಿನಗಳೊಳಗೆ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

### ಸ್ಥಿರಾಸ್ತಿಯ ಷೆಡ್ಯೂಲ್

3ನೇ ಪ್ರತಿವಾದಿಗೆ ಸೇರಿದ ಮಾಗಡಿ ರಸ್ತೆ, ಕಾರ್ಡ್ ರಸ್ತೆ ಲೇಔಟ್‌ನ ಸೈಟ್ ನಂ. (1942) ಸ್ಥಿರಾಸ್ತಿ ಸೈಟ್ ಸಂಖ್ಯೆ 1942, 1ನೇ ಮೈನ್, ಎಂ.ಸಿ. ಲೇಔಟ್, ಬೆಂಗಳೂರು ಇಲ್ಲಿ ಇರುವ 24' x 40' ಅಡಿಗಳ ಅಳತೆಯುಳ್ಳ ಆಸ್ತಿಗೆ ಚಕ್ಕುಬಂದಿ:

| | | |
|---|---|---|
| ಪೂರ್ವಕ್ಕೆ | --- | ಸೈಟ್ ನಂ. 1941 |
| ಪಶ್ಚಿಮಕ್ಕೆ | --- | ರಸ್ತೆ |
| ಉತ್ತರಕ್ಕೆ | --- | ರಸ್ತೆ |
| ದಕ್ಷಿಣಕ್ಕೆ | --- | ಸೈಟ್ ನಂ. 1943 |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ 08–03–2012 ರಂದು ನೀಡಿರುತ್ತೇನೆ.

**ಡಿ. ಪಾಂಡುರಂಗಪ್ಪ,**
ಚೀಟಿನಿಧಿಗಳ ಉಪ ನಿಬಂಧಕರು,
ಉತ್ತರ ವಲಯ, ಬೆಂಗಳೂರು ನಗರ ಜಿಲ್ಲೆ

**ಪಿ.ಆರ್. 359**

## ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು

### (ಮಾಹಿತಿ ಹಕ್ಕು ಅಧಿ ನಿಯಮ ಹಾಗೂ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2005 ರ ಅಡಿಯಲ್ಲಿ ಇಲಾಖೆಯ ಕಾರ್ಯಚರಣೆಗಳು)

(1) ಅಧಿಸೂಚನೆ ಸಂಖ್ಯೆ: ಸೈಕಪುಎ.ಸಿಬ್ಬಂದಿ.97.ಮಾಹಿತಿ.2005 ದಿನಾಂಕ 07–3–2012.

(2) ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಅಸುಇ.18.ಆರ್‌ಟಿಐ.2011 ದಿನಾಂಕ 03–2–2011.

ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2005ರ ಪ್ರಕಾರ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯ ಸಾರ್ವಜನಿಕ, ಸಕ್ಷಮ ಮತ್ತು ಅಪೀಲು ಪ್ರಾಧಿಕಾರಗಳು ಈ ಕೆಳಗಿನಂತಿವೆ :–

**ಸಾರ್ವಜನಿಕ ಪ್ರಾಧಿಕಾರ**

ಸಹಾಯಕ ನಿರ್ದೇಶಕರು,
ನಿರ್ದೇಶನಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ

**ಸಕ್ಷಮ ಪ್ರಾಧಿಕಾರ**

ಅ) ನಿರ್ದೇಶಕರು

ಆ) ಕಛೇರಿ ಅಧೀಕ್ಷಕರು (ಕೇಂದ್ರ ಸ್ಥಾನ)

**ಅಪೀಲು ಪ್ರಾಧಿಕಾರ**

ಅ) ನಿರ್ದೇಶಕರು

ಆ) ಕಛೇರಿ ಅಧೀಕ್ಷಕರು (ಕೇಂದ್ರ ಸ್ಥಾನ)

**ಇಲಾಖೆಯ ಕಾರ್ಯಚಟುವಟಿಕೆಗಳು:**

ಈ ಇಲಾಖೆಯ ಕಾರ್ಯವ್ಯಾಪ್ತಿಯ ಸೈನಿಕರು, ಮಾಜಿ ಸೈನಿಕರು ಹಾಗೂ ಅವರ ಅವಲೋಬಿತರ ಕಲ್ಯಾಣ ಕಾರ್ಯಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಆದುದರಿಂದ ಈ ಇಲಾಖೆಯ ಪ್ರಕಟಗೊಂಡ ಮಾಹಿತಿಯು ಸೈನಿಕರು ಮತ್ತು ಮಾಜಿ ಸೈನಿಕರಿಗೆ ಮತ್ತು ಅವೆ ಅವಲಂಬಿತರಿಗೆ ಸೀಮಿತವಾಗಿ ಇರುತ್ತದೆ. ಆದುದರಿಂದ, ಸೇವಾ ನಿರತ ಸೈನಿಕರು, ಮಾಜಿ ಸೈನಿಕರು ಹಾಗೂ ಅವರ ಅವಲಂಬಿತರಿಗೆ ಈ ಇಲಾಖೆಯಿಂದ ಪ್ರಕಟಗೊಳ್ಳುವ ಮಾಹಿತಿಯು ಈ ಕೆಳಗಿನಂತಿದೆ:–

1. ಇಲಾಖೆಯ ಕೇಂದ್ರ ಕಾರ್ಯಾಲಯವು ಬೆಂಗಳೂರಿನಲ್ಲಿರುತ್ತದೆ. ಎಲ್ಲಾ ಕಾರ್ಯಾಲಯಗಳಿಂದ ಬಗೆ ಹರಿಯದ ಯಾವುದೇ ವಿಷಯವನ್ನು ಈ ನಿರ್ದೇಶನಾಲಯದಿಂದ ಬಗೆ ಹರಿಸಲಾಗುವುದು. ಆದುದರಿಂದ ಈ ವಿಷಯವನ್ನು ಮುಖ್ಯವಾಗಿ ಸೈನಿಕರ, ಮಾಜಿ ಸೈನಿಕರ ಹಾಗೂ ಅವರ ಅವಲಂಬಿತರಿಗೆ ತಿಳಿಸಬೇಕಾಗಿದೆ. ಕಾರಣ ಜಿಲ್ಲಾ ಕಾರ್ಯಾಲಯಗಳಿಂದ ಬಗೆ ಹರಿಯುವ ಸಮಸ್ಯೆಗಳನ್ನು ಸಹ ನೇರವಾಗಿ ಸರ್ಕಾರಕ್ಕೆ ಬರೆಯುವುದು ಕಂಡು ಬಂದಿದೆ.

2. ಅಲ್ಲದೇ, ಸಂಬಂಧಪಟ್ಟ ಜಿಲ್ಲಾ ಕಾರ್ಯಾಲಯಗಳನ್ನು ಸಂಪರ್ಕಿಸದೆ, ಮಾಜಿ ಸೈನಿಕರು ಹಾಗೂ ಅವರ ಅವಲಂಬಿತರು ನೇರವಾಗಿ ನಿರ್ದೇಶನಾಲಯಕ್ಕೆ ಬರುತ್ತಿರುವುದು ಕಂಡು ಬಂದಿದೆ. ಆದುದರಿಂದ ಅವರ ಯಾವುದೇ ಸಮಸ್ಯೆಯನ್ನು ಮೊದಲು ಜಿಲ್ಲಾ ಕಾರ್ಯಾಲಯದ ಮುಖ್ಯಸ್ಥರಾದ ಜಂಟಿ/ಉಪ ನಿರ್ದೇಶಕರಿಗೆ ಪ್ರಸ್ತಾವ ಮಾಡಿ, ಅವರಿಂದ ಬಗೆಹರಿಯದ ಪಕ್ಷದಲ್ಲಿ, ಇಲಾಖಾ ಮುಖ್ಯಸ್ಥರಾದ ನಿರ್ದೇಶಕರಿಗೆ ಪ್ರಸ್ತಾವಿಸುವುದು.

ಇಲಾಖೆ ಜಿಲ್ಲಾ ಕಾರ್ಯಾಲಯಗಳ ಸ್ಥಳ ಹಾಗೂ ಕಾರ್ಯವ್ಯಾಪ್ತಿಯು ಈ ಕೆಳಗಿನಂತಿದೆ :–

| ಕ್ರಸಂ | ಕಛೇರಿಯ ಹೆಸರು, ವಿಳಾಸ ಮತ್ತು ಕಾರ್ಯ ನಿರ್ವಹಿಸುವ ಜಿಲ್ಲೆ | ನೋಡಲ್ ಅಧಿಕಾರಿಯ ಹೆಸರು ಮತ್ತು ಹುದ್ದೆ | ದೂರವಾಣಿ ಸಂಖ್ಯೆ |
|---|---|---|---|
| 1. | ಜಂಟಿ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಫೀಲ್ಡ್ ಮಾರ್ಷಲ್ ಕೆ ಎಂ ಕಾರ್ಯಪ್ಪ ಭವನ, ನಂ 58, ಫೀಲ್ಡ್ ಮಾರ್ಷಲ್ ಕೆ ಎಂ ಕಾರ್ಯಪ್ಪ ರಸ್ತೆ, ಬೆಂಗಳೂರು (ನಗರ)<br>ಬೆಂಗಳೂರು–25 | ಲೆ.ಕರ್ನಲ್(ನಿವೃತ್ತ) ವಿ ಸರಸ್ವತಿ<br>ಜಂಟಿ ನಿರ್ದೇಶಕರು sainikblr@rediffmail.com | 080– 25585119 |
| 2. | ಜಂಟಿ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಫೀಲ್ಡ್ ಮಾರ್ಷಲ್ ಕೆ.ಎಂ.ಕಾರ್ಯಪ್ಪ ಭವನ<br>ನಂ.58, ಫೀಲ್ಡ್ ಮಾರ್ಷಲ್ ಕೆ.ಎಂ.ಕಾರ್ಯಪ್ಪ ರಸ್ತೆ<br>ಬೆಂಗಳೂರು (ಗ್ರಾಮಾಂತರ ಜಿಲ್ಲೆ)<br>ಬೆಂಗಳೂರು – 560 025. | ಡಾ. ಎನ್ ಎಸ್ ಪ್ರಕಾಶ<br>ಜಂಟಿ ನಿರ್ದೇಶಕರು<br>sainikrural@rediffmail.com | 080 25588718 |
| 3. | ಜಂಟಿ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಕೋರ್ಟ ಆವರಣ<br>ಬೆಳಗಾವಿ–590 002. | ಶ್ರೀ ಎಂ ಎಸ್ ಲೋಲಾಕ್ಷ,<br>ಜಂಟಿ ನಿರ್ದೇಶಕರು<br>sainikwelfarebelgaum@yahoo.in | 0831 2469341 |
| 4. | ಜಂಟಿ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಮುಖ್ಯ ರಸ್ತೆ, ಮಡಿಕೇರಿ – 571 201. | ಶ್ರೀ ಬಿ ಆರ್ ಶೆಟ್ಟಿ<br>ಜಂಟಿ ನಿರ್ದೇಶಕರು<br>jtdirectordswrmdk@yahoo.com | 08272 229866 |

| ಕ್ರಸಂ | ಕಛೇರಿಯ ಹೆಸರು, ವಿಳಾಸ ಮತ್ತು ಕಾರ್ಯ ನಿರ್ವಹಿಸುವ ಜಿಲ್ಲೆ | ನೋಡಲ್ ಅಧಿಕಾರಿಯ ಹೆಸರು ಮತ್ತು ಹುದ್ದೆ | ದೂರವಾಣಿ ಸಂಖ್ಯೆ |
|---|---|---|---|
| 5. | ಉಪ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಜಿಲ್ಲಾಡಳಿತ ಭವನ, ನೆಲ ಮಹಡಿ,<br>(ಅಂಚೆ ಕಛೇರಿ ಹತ್ತಿರ),ಬಾಗಲಕೋಟೆ–587101 | ಮೇಜರ (ನಿವೃತ್ತ) ಶಿವಾಜಿ ಎಂ ತುಕ್ಕಾರ್<br>ಉಪ ನಿರ್ದೇಶಕರು<br>sainik.bgk@rediff.com | 08354 235434 |
| 6. | ಉಪ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಡಿ ಸಿ ಕಂಪೌಂಡ್, ಧಾರವಾಡ – 580 001. | ವಿಂಗ್ ಕಮಾಂಡರ್(ನಿ)<br>ಈಶ್ವರ್ ಕೊಡಳ್ಳಿ, ಉಪ ನಿರ್ದೇಶಕರು<br>sainikwelfaredwd@yahoo.com | 0836 2440176 |
| 7. | ಉಪ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಎಂ ಜಿ ರಸ್ತೆ, ಕಾರವಾರ – 581 301 | ಪ್ರಭಾರ, ಉಪ ನಿರ್ದೇಶಕರು<br>sainikkwr@gmail.com | 08382 226538 |
| 8. | ಉಪ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಸೈನಿಕ ರೆಸ್ಟ ಹೌಸ್ ಬಿಲ್ಡಿಂಗ್, ಊರ್ವ ಸ್ಟೋರ್ಸ್<br>ಅಶೋಕನಗರ – ಅಂಚೆ,<br>ಮಂಗಳೂರು –575 006 | ಪ್ರಭಾರ, ಉಪ ನಿರ್ದೇಶಕರು<br>dydirdswrmlore@yahoo.com | 0824 2450933 |
| 9. | ಉಪ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಬಾಲರಾಜ್ ಅರಸ್ ರಸ್ತೆ,ಶಿವಮೊಗ್ಗ –577 201 | ಲೆ.ಕರ್ನಲ್(ನಿವೃತ್ತ) ಗೀತಾ ಮಹಾಬಲ ಶೆಟ್ಟಿ,<br>ಉಪ ನಿರ್ದೇಶಕರು<br>shimoga@rediffmail.com | 08182 220925 |
| 10. | ಉಪ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>'ಶ್ರೀ ವಾಸವಿ ನಿಲಯ', ಶಂಕರೀಪುರ,<br>1ನೇ ಕ್ರಾಸ್, ಬಿ ಎಂ ರಸ್ತೆ,ಹಾಸನ –573 201 | ಪ್ರಭಾರ, ಉಪ ನಿರ್ದೇಶಕರು<br>sainikalyanhassan@in.com | 08172 250456 |
| 11. | ಉಪ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಜೆ ಎಲ್ ಬಿ ರಸ್ತೆ, ಮೈಸೂರು –570 005 | ಮೇಜರ್ (ನಿವೃತ್ತ) ಆರ್ ಎಸ್ ವಿಶ್ವನಾಥ್<br>ಉಪ ನಿರ್ದೇಶಕರು<br>sainikalyanhassan@in.com | 0821 2425240 |
| 12. | ಉಪ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ವಿಕಾಸ ಭವನ ಸಂಕೀರ್ಣ, ಮಿನಿ ವಿಧಾನ ಸೌಧ,<br>ಸ್ಟೇಷನ್ ರೋಡ್, ಗುಲಬರ್ಗಾ–585102 | ಡಾ: ದೊಡ್ಡಪ್ಪ ಹುಗಾರ<br>ಉಪ ನಿರ್ದೇಶಕರು<br>sainikwelfareglb@yahoo.com | 08472<br>225003 |
| 13. | ಉಪ ನಿರ್ದೇಶಕರ ಕಾರ್ಯಾಲಯ<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ<br>ಜಿಲ್ಲಾ ಕಛೇರಿ ಕಟ್ಟಡ, ಬಿಜಾಪುರ–586 101 | ಡಾ: ಜೆ ಆರ್ ಬಾಲಸುಬ್ರಮಣ್ಯಂ<br>ಉಪ ನಿರ್ದೇಶಕರು<br>Sainikwelfare-bijapurglb@yahoo.co.in | 08352 250913 |

3. ಕರ್ನಾಟಕದಲ್ಲಿ ಸುಮಾರು ಒಂದು ಲಕ್ಷ ಮಾಜಿ ಸೈನಿಕರಿದ್ದು ಮತ್ತು ಅವರ ಅವಲಂಬಿತರು ಸುಮಾರು 3 ಲಕ್ಷ ಇರುತ್ತಾರೆ. ಅವರಲ್ಲಿ ಸುಮಾರು 85000 ಮಾಜಿ ಸೈನಿಕರು ತಮ್ಮ ಹೆಸರುಗಳನ್ನು ದಾಖಲಾಯಿಸುತ್ತಾರೆ. ಅವರ ಕಲ್ಯಾಣ ಮತ್ತು ಪುನರ್ವಸತಿಗಾಗಿ ಕರ್ನಾಟಕ ಸರ್ಕಾರವು ಈ ಕೆಳಗಿನ ರಿಯಾಯಿತಿ ಜಾರಿಗೊಳಿಸಿದೆ :–

1. ಉದ್ಯೋಗ ಮೀಸಲಾತಿ.
2. ವಯೋಮಿತಿ ಸಡಿಲಿಕೆ ಹಾಗೂ ಅರ್ಜಿ ಶುಲ್ಕ ವಿನಾಯಿತಿ.

3. ವೇತನ ನಿಗಧಿ.
4. ತಾಂತ್ರಿಕ,ವೈದ್ಯಕೀಯ, ವೃತ್ತಿಪರ ಶಿಕ್ಷಣ ಹಾಗೂ ಇತರ ಕೋರ್ಸುಗಳಲ್ಲಿ ಮಾಜಿ ಸೈನಿಕರ ಮಕ್ಕಳಿಗೆ ಸೀಟುಗಳನ್ನು ಕಾಯ್ದಿರಿಸುವಿಕೆ.
5. ವೈದ್ಯಕೀಯ ಸವಲತ್ತು.
6. ಯುದ್ಧದಲ್ಲಿ ಮಡಿದ ಯೋಧರ ಅವಲಂಬಿತರಿಗೆ ಅನುಗ್ರಹಪೂರ್ವ ಅನುದಾನದ ಜಮೀನು ಅಥವಾ ಜಮೀನಿನ ಬದಲಾಗಿ ನಗದು ಅನುದಾನ ಮತ್ತು ಉಚಿತ ಮನೆ ನಿರ್ಮಾಣ.
7. ಶೌರ್ಯ ಹಾಗೂ ಶೌರ್ಯೇತರ ಪ್ರಶಸ್ತಿ ವಿಜೇತರಿಗೆ ನಗದು ಅನುದಾನ ಮತ್ತು ಜಮೀನು ಅಥವಾ ಜಮೀನಿನ ಬದಲಾಗಿ ನಗದು ಅನುದಾನ.
8. ಎರಡನೇ ಮಹಾ ಯುದ್ಧದಲ್ಲಿ ಭಾಗವಹಿಸಿ ಪಿಂಚಣಿ ಇಲ್ಲದೆ ಬಿಡುಗಡೆಯಾದ ಯೋಧರಿಗೆ ಮತ್ತು ಮೃತ ಯೋಧರ ಪತ್ನಿಯರಿಗೆ ಮಾಸಿಕ ಗೌರವಧನ.
9. ಸಶಸ್ತ್ರ ಪಡೆಯಲ್ಲಿ ಭರ್ತಿಯಾಗಲು ಇಚ್ಛಿಸುವ ಅರ್ಹ ಯುವ ಜನತೆಗೆ ಪೂರ್ವಬಾವಿ ತರಬೇತಿ.

ಸ್ಥಳ : ಬೆಂಗಳೂರು

ದಿನಾಂಕ : 09–03–2012
**ಪಿ.ಆರ್. 360**

**ನಿರ್ದೇಶಕರು (ಪ್ರ)**
ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್ : 198(ಪೋಲೀಸ್)/2010–11, ದಿನಾಂಕ : 16–02–2012.**

**ಉಪಸ್ಥಿತರು: ಡಾ॥ ವೈ.ಮಂಜುನಾಥ್,** ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ,<br>ಮೈಸೂರು ಜಿಲ್ಲೆ. | | ಸ್ವಾಮಿ ಬಿನ್ ಲೇ॥ ಪುಟ್ಟೇಗೌಡ |

**ಪ್ರಕರಣದ ಮುಖ್ಯಾಂಶಗಳು :–**

ದಿನಾಂಕ : 01–02–2011ರಂದು ಸಂಜೆ 4.30ರ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ಜಿಲ್ಲೆ ಇವರಿಗೆ ಭಾತ್ಮಿದಾರರಿಂದ ಬಂದ ಖಚಿತ ವರ್ತಮಾನದ ಮೇರೆಗೆ ಕೆ.ಆರ್.ನಗರ ತಾಲ್ಲೂಕು, ಚುಂಚನಕಟ್ಟೆ–ಕಿತ್ತೂರು ಸಾಲೆಕೊಪ್ಪಲು ಗೇಟ್ ಬಳಿ ರಸ್ತೆಯಲ್ಲಿ **ಕೆಎ–09/ಎಲ್–9388 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಚಾಂಫ್ ಮೊಫೆಡ್ ವಾಹನದಲ್ಲಿ** ಅಕ್ರಮವಾಗಿ 25.920ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಸ್ವಾಮಿ ಬಿನ್ ಲೇ॥ ಪುಟ್ಟೇಗೌಡ ಎಂಬ ಆರೋಪಿಯನ್ನು ದಸ್ತಗಿರಿ ಮಾಡಿರುವುದಾಗಿ, ಠಾಣಾ ಮೊಕದ್ದಮೆ ಸಂಖ್ಯೆ: 09/2011 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ: 02–02–2011ರಲ್ಲಿ ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅದರಂತೆ ದಿನಾಂಕ : 17–02–2011ರಂದು ಕೆ.ಆರ್.ನಗರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ: 01–02–2011 ರಂದು ಮೈಸೂರು ಜಿಲ್ಲೆ, ಕೆ.ಆರ್.ನಗರ ತಾಲ್ಲೂಕು, ಸಾಲೆಕೊಪ್ಪಲು ಗೇಟ್ ಬಳಿ ಚುಂಚನಕಟ್ಟೆ–ಕಿತ್ತೂರು ರಸ್ತೆಯಲ್ಲಿ **ಕೆಎ–09/ಎಲ್–9388 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಚಾಂಫ್ ಮೊಫೆಡ್ ವಾಹನದಲ್ಲಿ** ಅಕ್ರಮವಾಗಿ 25.920ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಆ ಸಂದರ್ಭದಲ್ಲಿ ಸ್ವಾಮಿ ಬಿನ್ ಲೇ॥ ಪುಟ್ಟೇಗೌಡ ಎಂಬ ಆರೋಪಿಯು ದಸ್ತಗಿರಿಯಾಗಿದ್ದು, ಈ ಬಗ್ಗೆ ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಕಾನೂನಿನಲ್ಲಿ ವಿವಿಧ ಜವಾಬ್ದಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸ್ಪಷ್ಟ ನಿಲುವನ್ನು ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (11) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನುಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ

ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/198(ಪೋಲೀಸ್)/2011-12, ದಿನಾಂಕ : 16-02-2012.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ಜಿಲ್ಲೆ ಇವರು ಹೂಡಲಾದ ಪ್ರ.ಮಾ.ವರದಿ ಸಂ: 09/2011, ದಿ: 01-02-2011 ರಂದು ವಶಪಡಿಸಿ **ಕೆಎ-09/ಎಲ್-9388 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಚಾಂಪ್ ವಾಹನವನ್ನು** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2012ನೇ ಇಸವಿ ಫೆಬ್ರವರಿ ತಿಂಗಳ 16ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್ : 136(ಪೋಲೀಸ್)/2010-11, ದಿನಾಂಕ : 16-02-2012.**

**ಉಪಸ್ಥಿತರು: ಡಾ॥ ವೈ.ಮಂಜುನಾಥ್,** ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು,<br>ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ,<br>ಮೈಸೂರು ಜಿಲ್ಲೆ. | | ಆರೋಪಿ ಪರಾರಿ |

**ಪ್ರಕರಣದ ಮುಖ್ಯಾಂಶಗಳು :-**

ದಿನಾಂಕ : 26-11-2011ರಂದು ಸಂಜೆ 5.45ರ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ಜಿಲ್ಲೆ ಇವರಿಗೆ ಭಾತ್ಮಿದಾರರಿಂದ ಬಂದ ಖಚಿತ ವರ್ತಮಾನದ ಮೇರೆಗೆ ಕೆ.ಆರ್.ನಗರ ತಾಲ್ಲೂಕು, ಕೆ.ಆರ್.ನಗರ-ಹುಣಸೂರು ರಸ್ತೆಯಲ್ಲಿರುವ ದೂಪದಕಟ್ಟೆ ಕೆರೆ ಬಳಿ ರಸ್ತೆಯಲ್ಲಿ **ಕೆಎ-45/ಇ-6871 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ವಿಕ್ಟರ್ ಜಿ.ಎಸ್. ಮೋಟಾರ್ ವಾಹನದಲ್ಲಿ** ಅಕ್ರಮವಾಗಿ 45ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ರಘು ಬಿನ್ ರಾಜೇಗೌಡ ಎಂಬ ಆರೋಪಿಯು ಪರಾರಿಯಾಗಿರುವುದಾಗಿ ವರದಿಸಿ, ಠಾಣಾ ಮೊಕದ್ದಮೆ ಸಂಖ್ಯೆ: 105/2011 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ: 22-11-11 ರಲ್ಲಿ ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅದರಂತೆ ದಿನಾಂಕ : 14-12-11ರಂದು ಕೆ.ಆರ್.ನಗರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ: 26-11-2011 ರಂದು ಮೈಸೂರು ಜಿಲ್ಲೆ, ಕೆ.ಆರ್.ನಗರ ತಾಲ್ಲೂಕು, ಕೆ.ಆರ್.ನಗರ-ಹುಣಸೂರು ರಸ್ತೆಯಲ್ಲಿರುವ ದೂಪದಕಟ್ಟೆ ಕೆರೆ ಬಳಿ ರಸ್ತೆಯಲ್ಲಿ **ಕೆಎ-45/ಇ-6871 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ವಿಕ್ಟರ್ ಜಿ.ಎಸ್. ಮೋಟಾರ್ ವಾಹನದಲ್ಲಿ** ಅಕ್ರಮವಾಗಿ 45ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಆ ಸಂದರ್ಭದಲ್ಲಿ ರಘು ಬಿನ್ ರಾಜೇಗೌಡ ಎಂಬ ಆರೋಪಿಯು ಪರಾರಿಯಾಗಿದ್ದು, ಈ ಬಗ್ಗೆ ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಕಾನೂನಿನಲ್ಲಿ ವಿವಿಧ ಜವಾಬ್ದಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸ್ಪಷ್ಟ ನಿಲುವನ್ನು ನಿರೂಪಿಸಿರುವುದಿಲ್ಲ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 5 | ಹಿರೋಹೊಂಡಾ ಬೈಕ್ : ಕೆಎ–19–ಎಲ್–2199 | ಆನಂದಪುರಂ ವಲಯದ ಅ.ಮೊ. ಸಂಖ್ಯೆ :58/11–12 ದಿ:12–08–2011 | M04029 | Not Visible |
| 6 | ಮಾರುತಿ ವ್ಯಾನ್ : ಕೆಎ–05–ಎಂಎ–6883 | ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ :33/11–12 ದಿ:15–08–2011 | 117775 | ST-91-IN-922943 |
| 7 | ಮಾರುತಿ ವ್ಯಾನ್ : ಕೆಎ–14–ಎಂ–7235 | ಆನಂದಪುರಂ ವಲಯದ ಅ.ಮೊ. ಸಂಖ್ಯೆ :54/11–12 ದಿ:31–07–2011 | 3607342 | 766389 |
| 8 | ಟ್ರ್ಯಾಕ್ಟರ್ ಕೆಎ–15–ಟಿ–7628, 7629 | ಆನವಟ್ಟಿ ವಲಯದ ಅ.ಮೊ. ಸಂಖ್ಯೆ :37/11–12 ದಿ:20–07–2011 | NLLO436-H9 | Not Visible |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಮನೋಜ್ ಕುಮಾರ್ ತ್ರಿಪಾಠಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 1043

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ

**ಅಧಿಸೂಚನೆ ಸಂಖ್ಯೆ:ಬಿ3:ಅಮೊ.ವಾಹನ.ವಿವ:23/11–12 ದಿನಾಂಕ:26–09–2011**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ, ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಸೀಲು ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ಬಜಾಜ್ ಬೈಕ್ ಪ್ಲಾಟಿನಂ ಕೆಎ–16–ಕ್ಯೂ–6427 | ಅಂಬ್ಲಿಗೊಳ ವಲಯದ<br>ಅ.ಮೊ. ಸಂಖ್ಯೆ :34/11–12 ದಿ:18–08–2011 | M-387633 | 1207F331628 |
| 2 | ಟಾಟಾ 909 ಕೆಎ–15–3572 | ಅಂಬ್ಲಿಗೊಳ ವಲಯದ<br>ಅ.ಮೊ. ಸಂಖ್ಯೆ :40/11–12 ದಿ:09–09–2011 | 909EX3697 | 29782 |
| 3 | ಲಾರಿ ಕೆಎ–18–6355 | ಶಿರಾಳಕೊಪ್ಪ ವಲಯದ<br>ಅ.ಮೊ. ಸಂಖ್ಯೆ :19/11–12 ದಿ:18–09–2011 | 5MXZ29L8 | AW2700193 |
| 4 | ಸುಜುಕಿ ಬೈಕ್ ಸಿಎಆರ್–1398 | ಶಿಕಾರಿಪುರ ವಲಯದ<br>ಅ.ಮೊ. ಸಂಖ್ಯೆ :54/10–11 ದಿ:15–03–2011 | 3503M006858 | 3504F000237 |
| 5 | ಹಿರೋಹೊಂಡಾ ಬೈಕ್ ಕೆಎ–14–ಯು–2215 | ಶಿಕಾರಿಪುರ ವಲಯದ<br>ಅ.ಮೊ. ಸಂಖ್ಯೆ :58/11–12 ದಿ:19–09–2011 | Not Visible | Not Visible |
| 6 | ಮಹೇಂದ್ರ ಪಿಕ್‌ಅಪ್ ಕೆಎ–09–2086 | ಆನವಟ್ಟಿ ವಲಯದ<br>ಅ.ಮೊ. ಸಂಖ್ಯೆ :59/11–12 ದಿ:24–08–2011 | AB41A14581 | Not Visible |
| 7 | ಮಹೇಂದ್ರ ಪಿಕ್‌ಅಪ್ ಕೆಎ–16–ಎಂ–4183 | ಹೊಸನಗರ ವಲಯದ<br>ಅ.ಮೊ. ಸಂಖ್ಯೆ :38/11–12 ದಿ:17–09–2011 | 31438682 | Not Visible |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳಸಹಿದಾರರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಲು ಸೂಚಿಸಿದೆ. ಈ ಮೇಲಿನ ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ ಎಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಇತರೆ ಮೂಲ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ತಿಳಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಮನೋಜ್ ಕುಮಾರ್ ತ್ರಿಪಾಠಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 1044

## ಉಪನಿರ್ದೇಶಕರವರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಸಂ: ಅ3: ದೂರು/ಸಿಸಿಎ:/ 15/2005-06 ದಿನಾಂಕ: 03-04-2012**

**–: ಅಧಿಕೃತ ಜ್ಞಾಪನ :–**

**ವಿಷಯ:** ಶ್ರೀ ಡಿ.ಓ. ಮಹೇಶ್ವರಪ್ಪ ಮುಖ್ಯ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೊರಟಗೆರೆ ಜಗಳೂರು ತಾ ಇವರು ವಿವಿಧ ಯೋಜನೆಗಳಡಿಯಲ್ಲಿ ಬಿಡುಗಡೆಯಾದ ಸರ್ಕಾರಿ ಅನುದಾನವನ್ನು ದುರಪಯೋಗದ ಬಗ್ಗೆ.

**ಉಲ್ಲೇಖ:**
1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಗಳೂರು, ಇವರ ಪತ್ರ ಸಂಖ್ಯೆ: ಎಜಃಹ.ದು./01-02 ದಿನಾಂಕ 12-8-2005
2) ಈ ಕಛೇರಿ ಪತ್ರ ಸಮ ಸಂಖ್ಯೆ ದಿನಾಂಕ: 6-10-2005
3) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಗಳೂರು ಇವರ ಪತ್ರ ಸಂ: 3. ಕ.ಹಾ. 5/06-07 ದಿನಾಂಕ: 31-8-2006
4) ಸದರೀ ಶಿಕ್ಷಕರ ಮನವಿ ದಿನಾಂಕ: 1-9-2006
5) ಈ ಕಛೇರಿಯ ಆದೇಶ ಪತ್ರ ಸಮ ಸಂಖ್ಯೆ ದಿನಾಂಕ; 19-9-2006
6) ಈ ಕಛೇರಿಯ ನೋಟೀಸ್ ಪತ್ರ ಸಮ ಸಂಖ್ಯೆ ದಿನಾಂಕ: 16-10-2006, 10-12-2008 , 30-7-2009
7) ಈ ಕಛೇರಿಯ ಆದೇಶ ಪತ್ರ ಸಮ ಸಂಖ್ಯೆ ದಿನಾಂಕ: 24-4-2010
8) ವಿಚಾರಣಾಧಿಕಾರಿಗಳ ವರದಿ ದಿನಾಂಕ: 21-9-2011
9) ಈ ಕಛೇರಿಯ ಎರಡನೇ ನೋಟೋಸ್ ಪತ್ರ ಸಮ ಸಂಖ್ಯೆ ದಿನಾಂಕ:16-11-2011
10) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಗಳೂರು ರವರ ಪತ್ರ ಸಂಖ್ಯೆ: ಎ1 [ಎ3] ಅ.ಗೈ.ಹಾ 01/2009-10 ದಿನಾಂಕ: 15-02-2012
11) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 18 ಸೇ.ಇ.ವಿ. ೨೦೦೧ ದಿನಾಂಕ: 14-09-2001

**ಪ್ರಸ್ತಾವನೆ:–**

ಶ್ರೀ ಡಿ.ಓ. ಮಹೇಶ್ವರಪ್ಪ ಮುಖ್ಯ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೊರಟಗೆರೆ ಜಗಳೂರು ತಾ ಆದ ಇವರು 2003-04 ನೇ ಸಾಲಿನಲ್ಲಿ ಸರ್ವ ಶಿಕ್ಷ ಅಭಿಯಾನದಡಿಯಲ್ಲಿ ಶಾಲೆಗೆ ಬಿಡುಗಡೆ ಮಾಡಲಾದ ಅನುದಾನದ ಹಣ ಒಟ್ಟು 53,000-00 ಸಾವಿರ ರೂಗಳನ್ನು ಖಾತೆಯಿಂದ ಬಿಡಿಸಿ ಉದ್ದೇಶಿತ ಕಾಮಗಾರಿಗಳಿಗೆ ಬಳಸದೇ ತಮ್ಮ ಸ್ವಂತಕ್ಕೆ ಬಳಸಿರುವುದಾಗಿ ಗ್ರಾಮಸ್ಥರು ದೂರು ನೀಡಿರುವ ಹಿನ್ನಲೆಯಲ್ಲಿ ದಿನಾಂಕ 6-6-2005 ರಂದು ಹಾಗೂ ದಿ:1-8-2005 ರಂದು ಶಾಲೆಗೆ ಬೇಟಿ ನೀಡಿ ಸದರಿ ಶಿಕ್ಷಕರು ಡಿಸೆಂಬರ್ 2004 ರಿಂದ ಏಪ್ರಿಲ್ 2005 ರ ಅವಧಿಯಲ್ಲಿ ವಿವಿಧ ದಿನಾಂಕಗಳಲ್ಲಿ ಒಟ್ಟು 53,000-00 ರೂಗಳನ್ನು ಖಾತೆಯಿಂದ ಬಿಡಿಸಿರುವುದು ಕಂಡು ಬಂದಿರುವುದಾಗಿ ಈ ಬಗ್ಗೆ ಸದರಿ ಮುಖ್ಯೋಪಾದ್ಯಾಯರ ಶಿಕ್ಷಕರಿಗೆ ದಿನಾಂಕ 2-8-2005 ರಂದು ರಲ್ಲಿ ಶೋಕಾಸ್ ನೋಟಿಸ್ ನೀಡಿ ದಿ: 6-8-2005 ರೊಳಗಾಗಿ ಸದರಿ ಹಣವನ್ನು ಖಾತೆಗೆ ಜಮಾ ಮಾಡುವಂತೆ ತಿಳಿಸಿದ್ದರೂ ಸಹ ಖಾತೆಗೆ ಜಮಾ ಮಾಡಿರುವುದಿಲ್ಲವೆಂದು ದಿನಾಂಕ 12-8-2005 ರಂದು ಶಿಕ್ಷಣ ಸಂಯೋಜಕರು ವರದಿ ಮಾಡಿರುವುದರಿಂದ ಶ್ರೀ ಡಿ.ಓ ಮಹೇಶ್ವರಪ್ಪ ಇವರು ಸರ್ಕಾರಿ ಹಣವನ್ನು ತಾತ್ಕಾಲಿಕ ದುರುಪಯೋಗ ಮಾಡಿಕೊಂಡಿರುವುದು ಸಾಭಿತಾಗಿರುವುದರಿಂದ ಇವರನ್ನು ಕರ್ತವ್ಯದಿಂದ ಅಮಾನತ್ತುಗೊಳಿಸಿ ವಿಚಾರಣೆ ನಡೆಸುವಂತೆ ಹಾಗೂ ಇವರ ಮೇಲೆ ಕ್ರಿಮಿನಲ್ ಮೊಕ್ಕದಮೆ ಹೂಡುವಂತೆ ಉಲ್ಲೇಖ [1] ರಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ ಜಗಳೂರು ಇವರು ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಉಲ್ಲೇಖ [2] ರ ಈ ಕಛೇರಿಯ ಆದೇಶದಲ್ಲಿ ಸದರೀ ಶಿಕ್ಷಕರನ್ನು ಕರ್ತವ್ಯದಿಂದ ಅಮಾನತ್ತುಗೊಳಿಸಲಾಗಿತ್ತು,

ನಂತರ ಸದರಿ ಶಿಕ್ಷಕರು ದುರ್ಬಳಕೆ ಮಾಡಿಕೊಂಡ ರೂ. 53,000=00 ರೂ.ಗಳನ್ನು ಸಂಬಂಧಿಸಿದ ನಿಧಿಗೆ ಜಮಾಡಿದ್ದು ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಕರ್ತವ್ಯದ ಮೇಲೆ ಪುನರ್‌ಸ್ಥಾಪಿಸಲು ಉಲ್ಲೇಖ [3] ರಲ್ಲಿ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಉಲ್ಲೇಖ [4] ರ ಮನವಿ ಮೇರೆಗೆ ಉಲ್ಲೇಖ [5]ರ ಆದೇಶದಲ್ಲಿ ಕರ್ತವ್ಯದ ಮೇಲೆ ಪುನರ್‌ಸ್ಥಾಪಿಸಲಾಗಿತ್ತು.

ಇಲಾಖಾ ವಿಚಾರಣೆ ನಡೆಸಲು ನಿರ್ಧರಿಸಿ ಉಲ್ಲೇಖ [6] ರ ದಿನಾಂಕ: 16-10-2006ರ ನೋಟೀಸ್ ಪತ್ರದಲ್ಲಿ ಸದರಿ ನೌಕರರ ಮೇಲಿನ ಆರೋಪಗಳ ಬಗ್ಗೆ ದೋಷಾರೋಪಣ ಪಟ್ಟಿ ಅನುಬಂಧ 1 ರಿಂದ 4ನ್ನು ಜಾರಿಗೊಳಿಸಿ ಆರೋಪಗಳನ್ನು ಒಪ್ಪಿಕೊಳ್ಳುವ ಬಗ್ಗೆ ಅಥವಾ ಒಪ್ಪಿಕೊಳ್ಳದೇ ಇರುವ ಬಗ್ಗೆ ಲಿಖಿತ ಹೇಳಿಕೆ ನೀಡುವಂತೆ ಕೇಳಲಾಗಿತ್ತು. ಆದರೆ ಸದರಿಯವರು ದೋಷಾರೋಪಣ ಪಟ್ಟಿಯನ್ನು ಪಡೆದು ಸ್ವೀಕೃತಿಯನ್ನು ನೀಡಿದ್ದು ಪುನಃ ಎರಡು ನೆನಪೋಲೆಗಳನ್ನು ಜಾರಿಗೊಳಿಸಿದರೂ ಸಹ ರಕ್ಷಣಾ ಹೇಳಿಕೆಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ.

ಪ್ರಯುಕ್ತ ಸದರೀ ಆರೋಪಗಳ ಬಗ್ಗೆ ವಿಚಾರಣೆ ನಡೆಸುವುದು ಸೂಕ್ತವೆನಿಸಿ ಉಲ್ಲೇಖ [7] ರಲ್ಲಿ ವಿಚಾರಣಾಪ್ರಾಧಿಕಾರ ರಚಿಸಿ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಸೂಚನೆ ನೀಡಲಾಗಿತ್ತು.

ಉಲ್ಲೇಖ [8]ರಲ್ಲಿ ವಿಚಾರಣಾಧಿಕಾರಿಗಳು ವರದಿಯನ್ನು ಸಲ್ಲಿಸಿರುತ್ತಾರೆ, ಪರಿಶೀಲಿಸಲಾಗಿ ಸದರಿ ಶಿಕ್ಷಕರ ಮೇಲಿನ ಒಂದು ಆರೋಪವು ದೃಡಪಟ್ಟಿರುವುದಾಗಿ ವರದಿ ಮಾಡಿರುತ್ತಾರೆ, ಸದರಿ ಶಿಕ್ಷಕರ ಮೇಲಿನ ಆರೋಪವು ದೃಡಪಟ್ಟ ಹಿನ್ನಲೆಯಲ್ಲಿ ವಿಚಾರಣಾ ವರದಿಯನ್ನು ಉಲ್ಲೇಖ [9]ರ ಎರಡನೇ ನೋಟೀಸ್ ಮೂಲಕ ಜಾರಿಗೊಳಿಸಿ ದೃಡಪಟ್ಟ ಆರೋಪದ ಕುರಿತು ರಕ್ಷಣಾ ಹೇಳಿಕೆಯನ್ನು ದಾಖಲೆಗಳೊಂದಿಗೆ ಸಲ್ಲಿಸಲು ಸೂಚನೆ ನೀಡಲಾಗಿತ್ತು ಆದರೆ ಸಲ್ಲಿಸಿರುವುದಿಲ್ಲ.

ಉಲ್ಲೇಖ [10]ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಗಳೂರು ಇವರು ಎರಡನೇ ನೋಟೀಸನ್ನು ಶ್ರೀ.ಡಿ.ಓ.ಮಹೇಶ್ವರಪ್ಪ ಶಿಕ್ಷಕರಿಗೆ ಜಾರಿಗೊಳಿಸಿದ್ದು ಈವರೆಗೆ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವೆಂದು ವರದಿಯನ್ನು ಸಲ್ಲಿಸಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸದರಿ ಶಿಕ್ಷಕರು ಇಲಾಖೆಯ ರೂ. 53,000=00 ಗಳನ್ನು ಸ್ವಂತಕ್ಕೆ ಬಳಸಿಕೊಳ್ಳುವ ಮೂಲಕ ಸರ್ಕಾರದ ಹಣವನ್ನು ತಾತ್ಕಾಲಿಕ ದುರುಪಯೋಗಪಡಿಸಿಕೊಂಡಿರುತ್ತರೆ, ಉಲ್ಲೇಖ [11]ರ ಸರ್ಕಾರದ ಆದೇಶದಂತೆ ಪರಿಶೀಲಿಸಿ ಈ ಕೆಳಕಂಡ ಆದೇಶ,

## ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ.ಬಿ.ಎ.ರಾಜಶೇಖರ ಶಿಸ್ತು ಪ್ರಾಧಿಕಾರಿ ಹಾಗೂ ಉಪನಿರ್ದೇಶಕ [ಆಡಳಿತ] ಆದ ನಾನು ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಿ.ಓ. ಮಹೇಶ್ವರಪ್ಪ ಮುಖ್ಯ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೊರಟಿಗೆರೆ ಜಗಳೂರು ತಾ [ಹಾಲಿ: ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮರೀಕಟ್ಟೆ, ಜಗಳೂರು ತಾಲ್ಲೂಕು] ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957 ರ ನಿಯಮ 285[4][B] ರಡಿ ಸಾರ್ವಜನಿಕ ಹಿತದೃಷ್ಠಿಯಿಂದ ದಿನಾಂಕ: 31-05-2012 ರಿಂದ ಜಾರಿಯಾಗುವಂತೆ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ.

ಹಾಗೂ ದಿನಾಂಕ: 01-06-2012 ರಿಂದ 31-08-2012ರವರೆಗಿನ ಮೂರು ತಿಂಗಳ ಅವಧಿಗೆ ನಿವೃತ್ತಿ ವೇತನಕ್ಕೆ ಬದಲಾಗಿ, ಈ ಮೂರೂ ತಿಂಗಳು ನಿವೃತ್ತಿಯಾದ ದಿನಾಂಕದ ನಿಕಟಪೂರ್ವದಲ್ಲಿ ಪಡೆಯುತ್ತಿದ್ದ ವೇತನಕ್ಕೆ ಸಮಾನವಾದ ಮೊತ್ತವನ್ನು ಪಡೆಯಲು ಅನುಮತಿ ನೀಡಿದೆ.

ಸದರಿ ಶಿಕ್ಷಕರ ಅಮಾನತ್ತಿನ ಅವಧಿಯನ್ನು ಅಮಾನತ್ತಿನಲ್ಲಿ ಕಳೆದ ಅವಧಿ ಎಂದು ಪರಿಗಣಿಸಿದೆ.

**ಬಿ.ಎ.ರಾಜಶೇಖರ**
ಶಿಸ್ತು ಪ್ರಾಧಿಕಾರಿ ಹಾಗೂ ಉಪನಿರ್ದೇಶಕ [ಆಡಳಿತ]
ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ

ಪಿ.ಆರ್. 496

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ–1**
**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**
**ಅಧಿಸೂಚನೆ**

**ಸಂಖ್ಯೆ : ಡಬ್ಲ್ಯೂಸಿಎ/ಸಿಆರ್–5/2012ಎಫ್. ದಿನಾಂಕ : 17/03/2012.**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಸೀತಾ w/o ಶ್ರೀ ಸುಂದರ ಶೆಟ್ಟಿಗಾರ್
2. ಶ್ರೀ ಶ್ರೀಪತಿ s/o ಶ್ರೀ ಸುಂದರ ಶೆಟ್ಟಿಗಾರ್
   R/at–4–106, Kunjingire Thalipady Village
   ಪುನರೂರು ಅಂಚೆ, ಮಂಗಳೂರು ತಾಲ್ಲೂಕು.

1. ದಿ. ಮೆನೇಜ್‌ಮೆಂಟ್ ಆಫ್
   ಮೆ॥ ಪ್ಲಾಂಟ್ ಟೆಕ್
   ಇಂಡಸ್ಟ್ರೀಯಲ್ ಸರ್ವಿಸಸ್ ಲಿ.,
   ಪ್ಲಾಟ್ ನಂ. 245,
   ಬೈಕಂಪಾಡಿ, ಇಂಡಸ್ಟ್ರೀಯಲ್ ಏರಿಯಾ
   ನ್ಯೂ ಮಂಗಳೂರು–575011.
2. Bajaj Allians General Insurance
   Company Ltd.
   107, Gystal Area 1ನೇ ಮಹಡಿ ಬಲ್ಮಠ ರಸ್ತೆ,
   ಮಂಗಳೂರು–575001

ಅರ್ಜಿದಾರಳಾದ ಶ್ರೀಮತಿ ಸೀತಾ W/o ಸುಂದರ ಶೆಟ್ಟಿಗಾರ್ ಇವರು ತಮ್ಮ ಮೈದುನನಾದ ಶ್ರೀ ಹರೀಶ್ ಶೆಟ್ಟಿಗಾರ್ ಇವರು 1ನೇ ಪ್ರತಿವಾದಿಗಳಾದ M/s Plant-Tech Industrial Services Ltd, ಸಂಸ್ಥೆಯಲ್ಲಿ Unloading of Catalyst ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ : 01–02–2012 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು. ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ. ಜಿ. ನಾಗೇಶ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು.
ದ.ಕ. ಉಪ ವಿಭಾಗ–1, ಮಂಗಳೂರು.

**ಪಿ.ಆರ್. 451**

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ–3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು–560 029**

**ಪ್ರಕರಣ ಸಂಖ್ಯೆ : ಸಿಡಬ್ಲ್ಯೂಸಿ/ಎಫ್‌ಸಿ/ಸಿಆರ್–22/2011 ದಿನಾಂಕ : 21–03–2012.**

**ಅರ್ಜಿದಾರರು** **ಪ್ರತಿವಾದಿ**

ಶ್ರೀಮತಿ ಗಂಗಮ್ಮ
W/o ಶ್ರೀ ಹನುಮಂತಪ್ಪ ಆರ್.
at ಗರಿಂಬಿಳು, ಶ್ರೀರಾಮಪುರ, ತಾಲ್ಲೂಕು ಹೊಸದುರ್ಗ

1. ಶ್ರೀಮತಿ ಶಾಂತಲಾ W/o ಲೇಟ್ ರಂಗನಾಥ
2. ಕು॥ ಮೇಘಾ D/o ಲೇಟ್ ರಂಗನಾಥ
3. ಕು॥ ಹರ್ಷ S/o ಲೇಟ್ ರಂಗನಾಥ
   ಸೋಮೇಶ್ವರ ಬಡಾವಣೆ, ದೊಡ್ಡಬಳ್ಳಾಪುರ.
4. ಕೃಷಿ ಬಿಲ್ಡರ್ಸ ರಾಮ ಅಯ್ಯಂಗಾರ್ ರೋಡ್,
   ವಿಶ್ವೇಶ್ವರಪುರಂ, ಬೆಂಗಳೂರು

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಗಂಗಮ್ಮ w/o ಶ್ರೀ ಹನುಮಂತಪ್ಪ ಆರ್. ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ದಿವಂಗತ ಲೇಟ್ ರಂಗನಾಥ ಇವರು ಪ್ರತಿವಾದಿ 2 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದೇನೆಂದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಉಪ ವಿಭಾಗ–3, ಬೆಂಗಳೂರು.

**ಪಿ.ಆರ್. 453**

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ–3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು–560 029**

**ಪ್ರಕರಣ ಸಂಖ್ಯೆ : ಸಿಡಬ್ಲ್ಯೂಸಿ/ಎಫ್‌ಸಿ/ಸಿಆರ್–02/2012 ದಿನಾಂಕ : 21–03–2012.**

| **ಅರ್ಜಿದಾರರು** | **ಪ್ರತಿವಾದಿ** |
|---|---|
| 1. ಶ್ರೀಮತಿ ಸರಸ್ವತಿ w/o ಲೇಟ್ ಪಿ. ಮೋಹನ್ | ಡಾ॥ ಜಯಕುಮಾರ್, ಮ್ಯಾನೇಜಿಂಗ್ ಟ್ರಸ್ಟಿ |
| 2. ಕು॥ ಚರ್ಕವತಿ ಪಿ.ಎಂ. | ಬೈಬಲ್ ಬಿಲ್ಡಿಂಗ್, ಚರ್ಚ್‌ಸ್ – ಮಿಶನ್, |
| 3. ಕು॥ ಚೆನ್ನವ್ವ ಪಿ.ಎಂ. | ಬೆಂಗಳೂರು–560 005 |
| ಗಾಯಿತ್ರಿ ಸ್ಕೂಲರೋಡ, ವಿಜಿನಾಪುರ, ಬೆಂಗಳೂರು | |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಸರಸ್ವತಿ ಹಾಗೂ ಇತರರು ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ದಿವಂಗತ ಲೇಟ್ ಪಿ. ಮೋಹನ್ ಇವರು ಪ್ರತಿವಾದಿ ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದೇನೆಂದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ
ವಿಭಾಗ–3, ಬೆಂಗಳೂರು.

**ಪಿ.ಆರ್. 454**

**KARNATAKA STATE CONSUMER DISPUTES REDRESSAL COMMISSION BASAVA BHAVANA, HIGH GROUNDS, BANGALORE-560001**

**NOTIFICATION**

**No. KSC/ADM/48/2003-04. DATED : 09-03-2012**

**Subject :** **Calender-2012 of Karnataka State Consumer Disputes Redressal Commission.**

**Reference :** Calender-2012 of Hon'ble High Court of Karnataka.

Karnataka State consumer Disputes Redressal Commission, Bangalore. Adopts to follow the General Holidays and Optional Holidays specified by the Government of Karnataka to be observed by all the Offices of the Government of Karnataka for the year 2012.

Except the day fixed for the hearing of urgent matters, there will be no regular sittings during the period mentioned below.

| | | |
|---|---|---|
| 01 | SUMMER VACATION : | From Monday the 23rd April, 2012 to Sunday the 20th May, 2012 (bdi) |
| 02 | DASARA VACATION : | From Monday the 22nd October, 2012 to Saturday the 27th October, 2012 (bdi) |
| 03 | WINTER VACATION : | From Monday the 17th December, 2012 to Tuesday the 1st January, 2013 (bdi). |

The Office of the Karnataka State Consumer Disputes Redressal Commission will be working from 10-00 A.M. to 05.30 P.M. on all working days of the State Government and the non sitting days mentioned above. All the District Forums in the State of Karnataka will work on all working days of the State Government.

By Order of the Hon'ble President.

**M. DEVARAJA BHAT,**

Registrar-cum-Administrative Officer,

Karnataka State Consumer Disputes Redressal Commission,

Bangalore.

**P.R. 455**

## ವಾಣಿಜ್ಯ ತೆರಿಗೆಗಳ ಇಲಾಖೆ

### ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಎಲ್.ವಿ.ಒ.–020) ಬೆಂಗಳೂರು ರವರ ನಡಾವಳಿಗಳು

**ಪ್ರಸ್ತುತ :** ಪುಷ್ಪ., ಸಿ.
ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು,
ಎಲ್.ವಿ.ಒ–020, ಬೆಂಗಳೂರು.

**ವಿಷಯ :** M/s. Shankara Infrastructure Materials Ltd., ಬೆಂಗಳೂರು
ಟಿನ್ ಸಂಖ್ಯೆ : 29150071079 ಇವರಿಗೆ 'ಎಫ್' ನಮೂನೆಯನ್ನು ನೀಡುವ ಬಗ್ಗೆ.

**ಉಲ್ಲೇಖ :** 1) ವರ್ತಕರ ಮನವಿ ಪತ್ರ ದಿನಾಂಕ : 02–07–2011.
2) ಈ ಕಛೇರಿ ಪತ್ರ ಸಂಖ್ಯೆ ವಾತೆಸಆ. ಎಲ್.ವಿ.ಓ–020/580/2011–12, ದಿನಾಂಕ : 22–12–2011
3) ವಾತೆಜಂಆ(ಆ).ಮೌ.ತ.ವಿ–1, ಬೆಂಗಳೂರು ಇವರ ಪತ್ರ ಸಂಖ್ಯೆ : ಸಿಆರ್. 1200/11–12 ದಿನಾಂಕ : 12–01–2012.
4) ಕೇಂದ್ರ ಮಾರಾಟ ತೆರಿಗೆ ನಿಯಮಾವಳಿಗಳು 1957 ನಿಯಮ 12(2)
5) ಈ ಕಛೇರಿಯಿಂದ M/s. Shankara Infrastructure Materials Ltd. ಬೆಂಗಳೂರು ಇವರಿಗೆ ನೀಡಲಾದ 'ಎಫ್' ನಮೂನೆ ಸಂಖ್ಯೆ : 0174299 ದಿನಾಂಕ : 06–04–2009.

**ಪ್ರಸ್ತಾವನೆ :**

ಮೆ॥ M/s. Shankara Infrastructure Materials Ltd. ಬೆಂಗಳೂರು, ಇವರು ಉಲ್ಲೇಖ (1)ರ ಪತ್ರದಲ್ಲಿ ಸದರಿಯವರು M/s Good Luck Steel Tubes Ltd. ಇವರಿಗೆ ವಿತರಿಸಿರುವ 'ಎಫ್' ನಮೂನೆ ಮೂಲ ಪತ್ರ ಸಂಖ್ಯೆ : 0174299 dtd. 06–04–2009 ಕಳೆದು ಹೋಗಿರುವ ಹಿನ್ನೆಲೆಯಲ್ಲಿ ನಕಲಿ 'ಎಫ್' ನಮೂನೆಯನ್ನು ನೀಡಬೇಕೆಂದು ಕೋರಿ, ಪೂರಕವಾಗಿ ಮೆ॥ M/s. Shankara Infrastructure Materials Ltd. ಬೆಂಗಳೂರು ಇವರು ಮೂಲ 'ಎಫ್' ನಮೂನೆ ಕಳೆದುಹೋಗಿರುವುದಕ್ಕೆ Preet Vihar District East Delhi, ಪೊಲೀಸ್ ಠಾಣೆ ಇಲ್ಲಿ ದೂರನ್ನು ದಾಖಲಿಸಿರುವ ಪ್ರತಿ, Form G- Form of Indemnity Bond, ದಿನಪತ್ರಿಕೆಗಳಲ್ಲಿ ಪ್ರಕಟಣೆ ನೀಡಿರುವ ಪ್ರತಿಯನ್ನು ಸಲ್ಲಿಸಿದ್ದರು. ಈ ಬಗ್ಗೆ ಉಲ್ಲೇಖ (2)ರಂತೆ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆ) ಮೌ.ತ.ವಿ–1, ಬೆಂಗಳೂರು ಕಛೇರಿಗೆ ಪತ್ರ ಬರೆಯಲಾಗಿ, ಉಲ್ಲೇಖ (3)ರ ಪತ್ರದಲ್ಲಿನಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ : ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಸ್ಥ.ಮೌ.ತೆ–020/ಸಂಖ್ಯೆ : 04/11-12, ದಿನಾಂಕ : 19–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕೇಂದ್ರ ಮಾರಾಟ ತೆರಿಗೆ ನಿಯಮಾವಳಿಗಳು 1956 ನಿಯಮ 12(2)ರಂತೆ M/s. Shankara Infrastructure Materials Ltd., ಬೆಂಗಳೂರು, ಇವರಿಗೆ ಈ ಕಛೇರಿಯಿಂದ ನೀಡಲಾಗಿದ್ದ 'ಎಫ್' ನಮೂನೆ ಸಂಖ್ಯೆ : 0174299ನ್ನು ರದ್ದುಗೊಳಿಸಿ ಆದೇಶಿಸಲಾಗಿದೆ.

ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು,
ಎಲ್.ವಿ.ಓ–020, ಬೆಂಗಳೂರು.

**ಪಿ.ಆರ್. 457**

## ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರ ನಡವಳಿಗಳು

**ವಿಷಯ :** ಶ್ರೀಮತಿ ಬಿಂದು ಮ್ಯಾಥ್ಯೂವ್, ಶುಶ್ರೂಷಕಿ, ಇವರ ಅನಧಿಕೃತ ಗೈರುಹಾಜರಿ ಆರೋಪದ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತಂತೆ–ಅಂತಿಮ ಆದೇಶ.

**ಓದಲಾಗಿದೆ :**

1. ಆಡಳಿತ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಬೈಂದೂರು, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ ಇವರ ದೋಷಾರೋಪಣಾ ಪಟ್ಟಿ ಸಂಖ್ಯೆ : ಸಿ. ಹೆಚ್.ಸಿ/ಬಿವೈ/362/2011-12, ದಿನಾಂಕ : 24–10–2011.
2. ನೌಕರರ ಲಿಖಿತ ಅಹವಾಲು ದಿನಾಂಕ : 02–11–2011.
3. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಉಡುಪಿ ಇವರ ಪತ್ರ ಸಂಖ್ಯೆ : ಸಿಬ್ಬಂದಿ(2)122/2011-12 ದಿನಾಂಕ : 28–12–2011.

**ಪ್ರಸ್ತಾವನೆ :**

ಶ್ರೀಮತಿ ಬಿಂದು ಮ್ಯಾಥ್ಯೂವ್, ಶುಶ್ರೂಷಕಿ, ಸಮುದಾಯ ಆರೋಗ್ಯ ಕೇಂದ್ರ, ಬೈಂದೂರು, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ ಇಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿ ಆದ ಆರೋಪದ ಬಗ್ಗೆ ಮೇಲೆ ಓದಲಾದ (1)ರಲ್ಲಿ ದೋಷಾರೋಪಣಾ ಪಟ್ಟಿಯನ್ನು ನೌಕರರಿಗೆ ಜಾರಿ ಮಾಡಲಾಯಿತು. ಅದಕ್ಕೆ ಉತ್ತರವಾಗಿ ನೌಕರರು ಮೇಲೆ ಓದಲಾದ (2)ರ ಪ್ರಕಾರ ಲಿಖಿತ ಹೇಳಿಕೆ ಸಲ್ಲಿಸಿರುತ್ತಾರೆ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಉಡುಪಿ ಇವರು ನೌಕರರು ಸಲ್ಲಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಸದರಿಯವರು ದಿನಾಂಕ : 23–02–2011 ರಂದು ಹೊಸದಾಗಿ ಸರ್ಕಾರಿ ಸೇವೆಗೆ ಸೇರಿದವರಾಗಿದ್ದು, ಯಾವುದೇ ಪೂರ್ವಾನುಮತಿ ಪಡೆಯದೆ ಹಾಗೂ ತಮ್ಮ ಹಕ್ಕಿನಲ್ಲಿ ಯಾವುದೇ ರಜೆ ಇಲ್ಲದೆ ಹಾಗೂ ಖಾಯಂಪೂರ್ವ ಸೇವಾವಧಿ ಘೋಷಣೆಯಾಗದೇ ಇರುವುದರಿಂದ ನಿಯಮಾನುಸಾರ ಅಗತ್ಯ ಕ್ರಮ ಕೈಗೊಳ್ಳುವಂತೆ ಕೋರುವುದನ್ನು ಪರಿಶೀಲಿಸಿ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಗ್ರೂಪ್ 'ಸಿ' ವೃಂದದ ನೇಮಕಾತಿ ಪ್ರಾಧಿಕಾರವಾಗಿರುವುದರಿಂದ ಕೆ.ಸಿ.ಎಸ್.(ಸಿಸಿಎ) ನಿಯಮಾವಳಿಗಳು 1957ರ ನಿಯಮ 8(ii) ರಿಂದ 8(viii) ವರೆಗಿನ ದಂಡನೆಯನ್ನು ವಿಧಿಸುವ ಸಕ್ಷಮ ಶಿಸ್ತು ಪ್ರಾಧಿಕಾರವಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಡಿಪಿಎನ್ (8) ಸಿಆರ್–38/2011–12 ದಿನಾಂಕ : 22–03–2012.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ॥ ಟಿ. ಎಸ್. ಚಲುವರಾಜ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ ಬಿಂದು ಮ್ಯಾಥ್ಯೂವ್, ಶುಶ್ರೂಷಕಿ, ಸಮುದಾಯ ಆರೋಗ್ಯ ಕೇಂದ್ರ, ಬೈಂದೂರು, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವೆ (ಪ್ರೊಬೇಷನ್) ನಿಯಮಗಳು 1977 ರ ನಿಯಮ 6(1) 'ಬಿ'ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದ್ದೇನೆ.

ನಿರ್ದೇಶಕರು.
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**ಪಿ.ಆರ್. 463**

## ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು

### ಅಧಿಸೂಚನೆ

**ಸಂ. ಪ್ರಾಸಾಅ.ಬೆಂ(ದ).ಆಟೋದರ–62/2011–12, ದಿನಾಂಕ : 09–03–2012**

ಬೆಂಗಳೂರು ನಗರ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಪ್ರಾಧಿಕಾರವು ಆಟೋರಿಕ್ಷಾ ಚಾಲನೆಯ ವಿವಿಧ ಅಂಶಗಳ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಚಲಿಸುವ ಆಟೋರಿಕ್ಷಾಗಳ ದರಗಳನ್ನು ಕೆಳಕಂಡತೆ ಪರಿಷ್ಕರಣೆ ಮಾಡಿ ದಿನಾಂಕ : 12–03–2012 ರಿಂದ ಜಾರಿಗೆ ಬರುವಂತೆ ಆದೇಶಿಸಿದೆ.

| | | |
|---|---|---|
| 1) ಕನಿಷ್ಠ ದರ ಮೊದಲ 1.8 ಕಿ.ಮೀಗೆ ದರ | – | ರೂ. 20/– (ಇಪ್ಪತ್ತು ಮಾತ್ರ) ಮೂರು ಜನ ಪ್ರಯಾಣಿಕರಿಗೆ |
| 2) ಪ್ರತಿ ಕಿಲೋಮೀಟರ್ ದರ | – | 11/– (ಹನ್ನೊಂದು ಮಾತ್ರ) ಮೂರು ಜನ ಪ್ರಯಾಣಿಕರಿಗೆ |
| 3) ಕಾಯುವಿಕೆ ದರ | | |
| ಅ) ಮೊದಲ ಐದು ನಿಮಿಷ | – | ಉಚಿತ |
| ಆ) ಮೊದಲ ಐದು ನಿಮಿಷದ ನಂತರ ಪ್ರತಿ ಹದಿನೈದು ನಿಮಿಷ ಅಥವಾ ಅದರ ಭಾಗಕ್ಕೆ | – | ರೂ. 1/– |
| 4) ಲಗೇಜು ದರ | | |
| ಅ) ಮೊದಲ 20 ಕೆ.ಜಿ.ಗೆ | – | ಉಚಿತ |
| ಆ) ಮೊದಲ 20 ಕೆ.ಜಿ.ಯಿಂದ ನಂತರ ಪ್ರತಿ 20 ಕೆ.ಜಿ.ಗೆ. ಅಥವಾ ಅದರ ಭಾಗಕ್ಕೆ | – | 2/– |
| ಇ) ಗರಿಷ್ಠ ಲಗೇಜು | – | 50 ಕೆ.ಜಿ.ಗಳು |
| 5) ರಾತ್ರಿ ವೇಳೆ ದರ | – | ಸಾಮಾನ್ಯ ದರ + ಸಾಮಾನ್ಯ ದರದ ಅರ್ಧಪಟ್ಟು ಹೆಚ್ಚು (ರಾತ್ರಿ 10–00 ರಿಂದ ಬೆಳಗಿನ ಜಾವ 5–00 ಘಂಟೆಯವರೆಗೆ) |

ಅ) ಪ್ರಾದೇಶಿಕ ಸಾರಿಗೆ ಪ್ರಾಧಿಕಾರದಿಂದ ಅನುಮೋದಿಸಲ್ಪಟ್ಟಿರುವ ನಿಗದಿತ ಪರಿಷ್ಕೃತ ದರದ ಮೂಲ ಪಟ್ಟಿಯನ್ನು ಪ್ರತಿಯೊಂದು ಆಟೋರಿಕ್ಷಾದಲ್ಲಿ ಪ್ರಮುಖ ಸ್ಥಾನದಲ್ಲಿ ಪ್ರದರ್ಶಿಸಬೇಕು.

ಆ) ಪರಿಷ್ಕೃತ ದರಗಳ ಮೀಟರಿನಲ್ಲಿ ಪ್ರದರ್ಶನವಾಗುವಂತೆ ಮೀಟರ್‌ಗಳನ್ನು ದಿನಾಂಕ : 08–06–2012 (90 ದಿನಗಳು) ಒಳಗಾಗಿ ಪುನಃ ಸತ್ಯಾಪನೆ ಮಾಡಿ ಮುದ್ರೆ ಹಾಕಿಸಿಕೊಳ್ಳುವುದು.

ಅಧ್ಯಕ್ಷರು,
ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಮತ್ತು
ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ

**ಪಿ.ಆರ್. 467**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES (KARNATAKA), BANGALORE-CLARIFICATION UNDER SECTION 59 (4) OF THE KARNATAKA VALUE ADDED TAX ACT-2003.

**Sub:** KVAT Act, 2003-Clarification under Section 59(4) regarding the rate of tax applicable on `Scouts & Guides' commodities-regarding.

**Ref:** Application dated. 20-12-2011 of M/s. The Bharat Scouts & Guides, Karnataka, Bangalore-560 002 TIN-29300474080.

In the application cited above M/s. The Bhart Scouts & Guides, Karnataka, State Headquartes, Prof. P. Sivashankar Circle, Kondajji Basappa Road, Fort Bangalore-560 002. Has sought clarification regarding the rate of tax applicable on Scouts & Guides commodities.

2. Section 59(4) of the Karnataka Value Added, Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

2. Hence the following clarification is issued.

**CLARIFICATION No. CLR. CR. 181/11-12, DATED : 30-03-2012.**

It is hereby clarified that the rates of tax applicable on the following goods are as indicated under :

| Sl. No. | Goods | Rate of tax |
|---|---|---|
| 1. | Scout Belt | 14% under Section 4(1) (b) of the KVAT Act, 2003 |

| Sl. No. | Goods | Rate of tax |
|---|---|---|
| 2. | Guide Belt | 14% under Section 4(1) (b) of the KVAT Act, 2003 |
| 3. | Scout Cap | 5% as per Notification No. FD 35 CSL 11 (VI) Dt. 29-03-2011. |
| 4. | ``P'' Cap | 5% as per Notification No. FD 35 CSL 11 (VI) Dt. 29-03-2011. |
| 5. | Cap Badge (Metal Badge) | 14% under Section 4(1) (b) of the KVAT Act, 2003 |
| 6. | Whistle | 14% under Section 4(1) (b) of the KVAT Act, 2003 |
| 7. | Lanyard | 14% under Section 4(1) (b) of the KVAT Act, 2003 |
| 8. | Lnyard | 14% under Section 4(1) (b) of the KVAT Act, 2003 |
| 9. | Association Flag | 14% under Section 4(1) (b) of the KVAT Act, 2003 |
| 10. | Scarf | 5% under entry 78(2) of the Third schedule to the KVAT Act, 2003. |
| 11. | Woggle | 14% under Section 4(1) (b) of the KVAT Act, 2003 |
| 12. | Stockings | 5% under entry 78(1) of the Third schedule to the KVAT Act, 2003. |
| 13. | Socks | 5% under entry 78(1) of the Third schedule to the KVAT Act, 2003. |
| 14. | Books | Exempted under entry 11 of the First schedule to the KVAT Act, 2003 |
| 15. | Badges (of cotton cloth) | 5% under entry 78(7) of the Third schedule to the KVAT Act, 2003. |

**PRADEEP SINGH KHAROLA**
Commissioner of Commercial Taxes
(Karnataka), Bangalore.

**P.R. 469**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

### ಪ್ರಕಟಣೆ

**ಪ್ರ.ಸಂ.ಕಾಅದಾ/ಕಾನಪ/ಸಿ.ಆರ್–15/2012, ದಿನಾಂಕ : 29–03–2012.**

**ಅರ್ಜಿದಾರರು**

1. ಸೈಯದ್ ಹುಸೇನ್ ಸಾಬ್ ಬಿನ್ ಸೈಯದ್ ಸಾಬ್ 47 ವರ್ಷಗಳು.
2. ರೆಹನಾ ಬೀ ಕೋಂ ಸೈಯದ್ ಹುಸೇನ್ ಸಾಬ್ 42 ವರ್ಷಗಳು.
3. ಚಮರ್ ಸಾಬ್ 19 ವರ್ಷಗಳು.
4. ನಗ್ಮಾ, 11 ವರ್ಷಗಳು.
5. ಮುಜಾಹಿದ್ 7 ವರ್ಷಗಳು.
6. ಯಸೀನಾ, 6 ವರ್ಷಗಳು.

ವಿಳಾಸ : # 317, ಬೀಡಿ ಲೇ–ಔಟ್, ದಾವಣಗೆರೆ.

**ಪ್ರತಿವಾದಿಗಳು**

1. ಎಸ್. ಆರ್. ಶಿವಕುಮಾರ್ ಬಿನ್ ಎಸ್.ಎನ್. ರೇವಣಸಿದ್ಧಪ್ಪ
2. ಎಸ್. ಆರ್. ಅರುಣ @ ಸುನಿಲ್ ಬಿನ್ ಎಸ್.ಎನ್. ರೇವಣಸಿದ್ದಪ್ಪ ಬ್ಯುಜನೆಸ್ ಮ್ಯಾನ್ಸ್ # 1384/29–30, 1ನೇ ಮೇನ್, 4ನೇ ಕ್ರಾಸ್, ವಿದ್ಯಾನಗರ, ದಾವಣಗೆರೆ.

ಶ್ರೀ ಸೈಯದ್ ಹುಸೇನ್ ಸಾಬ್ ಬಿನ್ ಸೈಯದ್ ಸಾಬ್, ರೆಹನಾ ಬೀ ಕೋಂ ಸೈಯದ್ ಹುಸೇನ್ ಸಾಬ್, ಚಮನ್ ಸಾಬ್, ನಗ್ಮಾ, ಮುಜಾಹಿದ್, ಯಸೀನಾ ಇವರುಗಳಾದ ನಾವು ಮೃತ ಖಲೀಲ್ ಇವರ ತಂದೆ–ತಾಯಿ ಮತ್ತು ಸಹೋದರ, ಸಹೋದರಿಯರು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಖಲೀಲ್ ಪ್ರತಿವಾದಿಗಳಾದ ಎಸ್.ಆರ್. ಶಿವಕುಮಾರ್ ಬಿನ್ ಎಸ್.ಎನ್. ರೇವಣಸಿದ್ದಪ್ಪ ಮತ್ತು ಎಸ್.ಆರ್. ಅರುಣ @ ಸುನಿಲ್ ಬಿನ್ ಎಸ್. ಎನ್. ರೇವಣಸಿದ್ದಪ್ಪರವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು

ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ. ಹೆಚ್. ಹಿರೇಗೌಡರ್,**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪಿ.ಆರ್. 471**

## ನ್ಯಾಯಮೂರ್ತಿ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗ, ಬೆಂಗಳೂರು–52

### ಅಧಿಸೂಚನೆ

ನಗರದ ಸಿವಿಲ್ ನ್ಯಾಯಾಲಯದ ಸಂಕೀರ್ಣದಲ್ಲಿ ಮಾರ್ಚ್ 2, 2012ರಂದು ನಡೆದ ಹಿಂಸಾತ್ಮಕ ಘಟನೆಗಳ ತನಿಖೆಯನ್ನು ನಡೆಸಲು, ವಿಚಾರಣಾ ಆಯೋಗ ಕಾಯಿದೆ, 1952ರ ವಿಭಾಗ 3 (1)ರ ಅಡಿಯಲ್ಲಿ, ನ್ಯಾಯಮೂರ್ತಿ ಆರ್. ಜಿ. ವೈದ್ಯನಾಥರ (ಕರ್ನಾಟಕ ಉಚ್ಚ ನ್ಯಾಯಾಲಯ ಹಾಗೂ ಮುಂಬಯಿ ಉಚ್ಚ ನ್ಯಾಯಾಲಯದ ಪೂರ್ವ ನ್ಯಾಯಮೂರ್ತಿ) ನೇತೃತ್ವದಲ್ಲಿ, ಕರ್ನಾಟಕ ಸರ್ಕಾರವು ಏಕ ಸದಸ್ಯ ವಿಚಾರಣಾ ಆಯೋಗವನ್ನು ನೇಮಕ ಮಾಡಿದೆ.

**ಆಯೋಗದ ವ್ಯಾಪ್ತಿಯು ಕೆಳಕಂಡಂತೆ ಇದೆ :**

"i. ಶುಕ್ರವಾರ ಮಾರ್ಚ್ 2, 2012ರಂದು ನಗರದ ಸಿವಿಲ್ ನ್ಯಾಯಾಲಯದ ಸಂಕೀರ್ಣದ ಆವರಣದಲ್ಲಿ ನಡೆದ ಘಟನೆಗಳ ಸರಣಿ ಹಾಗೂ ಸಂದರ್ಭ ಹಾಗೂ ವಿಸ್ತೃತ ಹಿಂಸಾಚಾರ, ಖಾಸಗಿ ಹಾಗೂ ಸಾರ್ವಜನಿಕ ವಾಹನಗಳ ದಹನ, ಮಾಧ್ಯಮದ ವ್ಯಕ್ತಿಗಳು, ಅಡ್ವೋಕೇಟ್‌ಗಳು ಹಾಗೂ ಪೊಲೀಸರ ನಡುವೆ ನಡೆದ ದೈಹಿಕ ಹಿಂಸಾಚಾರಕ್ಕೆ ಎಡೆಮಾಡಿಕೊಟ್ಟ ಕಾರಣಗಳ ವಿಚಾರಣೆ.

ii. ಮೇಲ್ಕಂಡ ಘಟನೆಗಳಿಗೆ ಕಾರಣವಾದ ವ್ಯಕ್ತಿಗಳು ಹಾಗೂ ಸಂಸ್ಥೆಗಳನ್ನು ಗುರುತಿಸುವುದು.

iii. ಪರಿಸ್ಥಿತಿಯನ್ನು ಪರಿಣಾಮಕಾರಿಯಾಗಿ ಹಾಗೂ ಸಮಯೋಚಿತವಾಗಿ ನಿರ್ವಹಿಸುವಲ್ಲಿ ಪೊಲೀಸರು ತಮ್ಮ ಕರ್ತವ್ಯಗಳನ್ನು ಶ್ರದ್ಧೆಯಿಂದ ನೆರವೇರಿಸಿದುದ್ದನ್ನು ಖಚಿತಪಡಿಸಿಕೊಳ್ಳುವುದು.

iv. ಭವಿಷ್ಯದಲ್ಲಿ ಇಂತಹ ಘಟನೆಗಳು ಪುನಃ ನಡೆಯದಂತೆ ತಡೆಗಟ್ಟಲು ಕೈಗೊಂಡ ಕ್ರಮಗಳೂ ಸೇರಿದಂತೆ, ಮೇಲ್ಕಂಡ ಘಟನೆಗಳಿಗೆ ಸಂಬಂಧಿಸಿದ ಯಾವುದೇ ಕ್ರಮ ಅಥವಾ ಕರ್ತವ್ಯಲೋಪಗಳು ಅಥವಾ ಸಂಬಂಧಪಟ್ಟ ಹಾಗೂ ಈ ಕಾರಣದಿಂದ ಉಂಟಾದ ಯಾವುದೇ ಇತರ ಅಂಶ."

ಮೇಲ್ಕಂಡ ನಿಬಂಧನೆಗಳಿಗೆ ಸಂಬಂಧಿಸಿದಂತೆ, ಅದನ್ನು ಕುರಿತಾಗಿ ತಿಳಿದ ಪಕ್ಷದಲ್ಲಿ, ಅಡ್ವೋಕೇಟ್‌ಗಳು, ಮಾಧ್ಯಮದ ವ್ಯಕ್ತಿಗಳು, ಪೊಲೀಸ್ ಇಲಾಖೆಯವರು ಹಾಗೂ ಸಾರ್ವಜನಿಕ ವ್ಯಕ್ತಿಗಳು ಹೇಳಿಕೆಗಳನ್ನು ನೀಡಲು ಆಯೋಗವು ಈ ಮೂಲಕ ಕರೆ ನೀಡುತ್ತದೆ. ಅಂತಹ ಹೇಳಿಕೆಗೆ ಅಫಿಡವಿಟ್‌ನ ಆಧಾರವನ್ನು ನೀಡಲಾಗುತ್ತದೆ. ಪ್ರತಿಯೊಂದು ಹೇಳಿಕೆ ಹಾಗೂ ಅಫಿಡವಿಟ್‌ನೊಂದಿಗೆ, ಅದರ ಮೂರು ಪ್ರತಿಗಳನ್ನು ನೀಡಬೇಕು. ಅನುಬಂಧ 1,2,3,4, ಇತ್ಯಾದಿ ಸಂಖ್ಯೆಗಳನ್ನು ನೀಡುವ ಮೂಲಕ, ಹೇಳಿಕೆಗಳು ಅಥವಾ ಅಫಿಡವಿಟ್‌ಗಳು ಎಂದು ಉಲ್ಲೇಖಿಸಲಾದ ಯಾವುದೇ ದಾಖಲೆಗಳನ್ನೂ ಸಹ ಅಂತಹ ವ್ಯಕ್ತಿಗಳು ಲಗತ್ತಿಸಬಹುದು. ಹೈಗ್ರೌಂಡ್ಸ್ ಪೊಲೀಸ್ ಠಾಣೆ, ಬೆಂಗಳೂರು–560 001, ಇದರ ಎದುರಿಗಿರುವ, ಬಸವ ಭವನದ ಬಳಿಯ ಬಾಲಬ್ರೂಯಿ ವಿಐಪಿ ಅತಿಥಿ ಗೃಹದಲ್ಲಿರುವ ಆಯೋಗದ ಕಛೇರಿಗೆ, ಏಪ್ರಿಲ್ 10, 2012ರಂದು ಅಥವಾ ಅದಕ್ಕೆ ಮುನ್ನ, ಬೆಳಿಗ್ಗೆ 11.00 ಗಂಟೆಯಿಂದ ಸಂಜೆ 4.00 ಗಂಟೆಗಳ ನಡುವೆ, ಎಲ್ಲ ಕೆಲಸದ ದಿನಗಳಂದು, ಸ್ವತಃ ಅಥವಾ ರಿಜಿಸ್ಟರ್ಡ್ ಅಂಚೆಯ ಮೂಲಕ ಈ ಹೇಳಿಕೆಗಳು ಹಾಗೂ ಅಫಿಡವಿಟ್‌ಗಳನ್ನು ಅದರ ಪ್ರತಿಗಳೊಂದಿಗೆ, ಸಲ್ಲಿಸತಕ್ಕದ್ದು.

**ಆಯೋಗದ ಆದೇಶದ ಮೇರೆಗೆ**

**ಎಸ್. ರಂಗಯ್ಯ,**
ನ್ಯಾಯಾಲಯದ ಅಧಿಕಾರಿ ಹಾಗೂ ಪ್ರಭಾರಿ ಕಾರ್ಯದರ್ಶಿ.

## JUSTICE R. G. VAIDYANATHA COMMISSION OF INQUIRY, BANGALORE-52.

### NOTIFICATION

Government of Karnataka has appointed One Man Commission of Inquiry headed by Justice R. G. Vaidyanatha (Former Judge of Karnataka High Court and Bombay High Court) under Section 3 (1) of the Commission of Inquiry Act, 1952 to probe into the violent incidents that took place on 2nd March 2012 in the City Civil Court Complex.

The terms of reference of the Commission is as follows:

" i. To enquire into the sequence of events and circumstance as well as reasons leading to the extensive violence, burning of the private and public vehicles, physical violence between media persons advocates

and police in the premises of the City Civil Court complex in Bangalore which occurred on Friday, the 2nd March 2012.

ii. To identify persons and organizations responsible for the above incidents.

iii. To ascertain whether the Police performed their duties diligently in dealing with the situation effectively and promptly ;

iv. Any other point which arises from and is connected with or incidental to any Act or omission relating to the above incidents including steps and measures to be taken to prevent recurrence of such events in future."

The Commission hereby calls upon advocates, media personnel, police personnel and members of public to file statements regarding above terms, if they are aware of the same. Such statements shall be supported by an affidavit. Each statement and affidavit should be accompanied by three photo copies of the same. Such persons may also annex any documents which are referred to in the statement or affidavits by giving numbers as Annexure 1,2,3,4, etc., These statements and affidavits along with the copies should be filed in the office of the Commission at Balabrooie, VIP Guest House, near Basava Bhavana, opposite to High Grounds Police Station Bangalore-560001 on or before **10th April 2012**, and may be filed between 11.00 A.M. and 4.00 P.M. on all working days, either in person or through Regd. Post.

**BY ORDER OF THE COMMISSION**

**S. RANGAIAH**
Court Officer & in-charge Secretary.

**P.R. 498**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪವಿಭಾಗ–2
## ಬೆಂದೂರ್‌ವೆಲ್ ವೃತ್ತ, ಕಂಕನಾಡಿ, ಮಂಗಳೂರು ಇವರ ನ್ಯಾಯಾಲಯ

**ಅಧಿಸೂಚನೆ**

**ಸಂಖ್ಯೆ : ಡಬ್ಲ್ಯೂಸಿಎ/ಎಸ್.ಆರ್–11/2012(ಎಫ್) ದಿನಾಂಕ : 31–03–2012**

**ಅರ್ಜಿದಾರರು**

1. ಶ್ರೀಮತಿ ದಮಯಂತಿ, ವಯಸ್ಸು 28 ವರ್ಷ
ಕೋಂ : ಲೇಟ್ ರವಿಪ್ರಕಾಶ,
2. ವಿನಿಕ್, ಪ್ರಾಯ 3 ವರ್ಷ,
ಬಿನ್ ಲೇಟ್ ರವಿಪ್ರಕಾಶ,
3. ಶ್ರೀಮತಿ ಸೀತಾ, ವಯಸ್ಸು 50 ವರ್ಷ,
ಕೋಂ ಲೇಟ್ ಬೂಬ ಮೂಲ್ಯ,
ವಾಸ : ಕಡಂಬಳಿಕೆ ಮನೆ, ಬಂಟ್ವಾಳ ಕಸಬ,
ಬಂಟ್ವಾಳ ತಾಲ್ಲೂಕು.

**ಪ್ರತಿವಾದಿಗಳು**

1) ಕಾರ್ಯನಿರ್ವಾಹಕ ಇಂಜಿನಿಯರ್ (ವಿ)
ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿ ನಿಯಮಿತ,
ಬಂಟ್ವಾಳ ವಿಭಾಗ, ಬಂಟ್ವಾಳ.

ಅರ್ಜಿದಾರರಾದ ಶ್ರೀಮತಿ ದಮಯಂತಿ ಇವರು ತನ್ನ ಗಂಡನಾದ ರವಿಪ್ರಕಾಶ, ಪ್ರತಿವಾದಿಗಳಲ್ಲಿ ಕೆಲಸಗಾರನಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ, ದಿನಾಂಕ: 10–10–2011ರಂದು ಅಪಘಾತಕ್ಕೀಡಾಗಿ ದಿನಾಂಕ:17–10–2011ರಂದು ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದುದರಿಂದ, ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ಮೂವತ್ತು (30) ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗಧಿತ ಸಮಯದಲ್ಲಿ ಈ ನ್ಯಾಯಾಲಯವು ಯಾವುದೇ ಕ್ಲೈಮ್ ಅರ್ಜಿ ; ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಎಂ. ಆನಂದ ಮೂರ್ತಿ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪವಿಭಾಗ–2, ಮಂಗಳೂರು.

**ಪಿ.ಆರ್. 476**